

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೨-೧೩ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಪ್ರೊ. ದೇಜಗೌರವರ ಪ್ರವಾಸ ಸಾಹಿತ್ಯ


ನಿಬಂಧಕಾರರು

**ಭರತೇಶ ಎಚ್.ಎಸ್**

ನೋಂದಣಿ ಸಂಖ್ಯೆ : KVTMKS - 00598

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ.)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಟಿ.ಕೆ.ಕೆಂಪೇಗೌಡ**
ಸಹಾಯಕ ಪ್ರಾಧ್ಯಾಪಕರು, ಮಹಾರಾಜ ಕಾಲೇಜು,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು





ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು


೨೦೧೨ - ೧೩



# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೨–೧೩ನೇ ಸಾಲಿನ ಎಂ.ಫಿಲ್. ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ಸಂಪ್ರಬಂಧ

# ಪ್ರೊ. ದೇಜಗೌರವರ ಪ್ರವಾಸ ಸಾಹಿತ್ಯ

ನಿಬಂಧಕಾರರು

**ಭರತೇಶ ಎಚ್.ಎಸ್**

ನೋಂದಣಿ ಸಂಖ್ಯೆ : KVTMKS - 00598

ಕನ್ನಡ ಎಂ.ಫಿಲ್ ವಿದ್ಯಾರ್ಥಿ (ಹಂಪಿ, ಕ.ವಿ.ವಿ.)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಟಿ.ಕೆ. ಕೆಂಪೇಗೌಡ**

ಸಹಾಯಕ ಪ್ರಾಧ್ಯಾಪಕರು, ಮಹಾರಾಜ ಕಾಲೇಜು,

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

**ಕುವೆಂಪು ವಿದ್ಯಾವರ್ಧಕ ಟ್ರಸ್ಟ್**

**ಜಯಲಕ್ಷ್ಮೀಪುರಂ, ಮೈಸೂರು**

೨೦೧೨–೧೩

# ಅಭ್ಯರ್ಥಿಯ ಘೋಷಣಾ ಪತ್ರ

**'ಪ್ರೊ. ದೇಜಗೌರವರ ಪ್ರವಾಸ ಸಾಹಿತ್ಯ'** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮಸಂಖ್ಯೆ KVTMKS - 00598 ವಿದ್ಯಾರ್ಥಿ ಆದ ನಾನು ೨೦೧೨-೧೩ನೇ ಸಾಲಿನ ಪರೀಕ್ಷೆಗಾಗಿ **ಡಾ. ಟಿ.ಕೆ.ಕೆಂಪೇಗೌಡ, ಸಹಾಯಕ ಪ್ರಾಧ್ಯಾಪಕರು, ಮಹಾರಾಜ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಮೈಸೂರು

ದಿನಾಂಕ: ೨೨-೦೭-೨೦೧೩

**(ಭರತೇಶ ಎಚ್.ಎಸ್)**

೨೦೧೨-೧೩ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು.

# ದೃಢೀಕರಣ ಪ್ರಮಾಣಪತ್ರ

೨೦೧೨-೧೩ನೇ ಸಾಲಿನಲ್ಲಿ ಕ್ರಮಸಂಖ್ಯೆ KVTMKS-00598ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ **ಭರತೇಶ ಎಚ್.ಎಸ್** ಅವರು ನನ್ನ ಮಾರ್ಗದರ್ಶನದಲ್ಲಿ **'ಪ್ರೊ. ದೇಜಗೌರವರ ಪ್ರವಾಸ ಸಾಹಿತ್ಯ'** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
ದಿನಾಂಕ: ೨೨-೦೭-೨೦೧೩

**(ಡಾ. ಟಿ.ಕೆ.ಕೆಂಪೇಗೌಡ)**
**ಸಹಾಯಕ ಪ್ರಾಧ್ಯಾಪಕರು, ಮಹಾರಾಜ ಕಾಲೇಜು,**
**ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು**

# ಪ್ರೊ. ದೇಜಗೌರವರ ಪ್ರವಾಸ ಸಾಹಿತ್ಯ

## ಪ ರಿ ವಿ ಡಿ



*****

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ.

ನಮ್ಮಲ್ಲಿ "ದೇಶ ಸುತ್ತು ಕೋಶ ಓದು" ಎಂಬ ಗಾದೆಯಿದೆ. ಸಾಮಾನ್ಯ ಮನುಷ್ಯನ ಲೋಕಜ್ಞಾನ, ಅನುಭವಗಳು ವಿಸ್ತಾರಗೊಳ್ಳಲಿ ಎಂದು ಹಿರಿಯರು ಈ ಮಾತನ್ನು ಹೇಳುತ್ತಿದ್ದರು. ಕೋಣೆಯಲ್ಲಿ ಕುಳಿತು ಪುಸ್ತಕ ಓದುವುದರ ಮೂಲಕ ಇಲ್ಲವೇ ದೇಶವನ್ನು ಸಂಚಾರ ಮಾಡುವುದರ ಮೂಲಕ ಒಬ್ಬ ವ್ಯಕ್ತಿಯ ಜೀವನಾನುಭವ ಮತ್ತು ಪ್ರಾಪಂಚಿಕ ತಿಳುವಳಿಕೆಗಳು ಹೆಚ್ಚಾಗುತ್ತಿದ್ದವು.

ಮನುಷ್ಯ ತನ್ನ ಜೀವಿತಾವಧಿಯಲ್ಲಿ ಸಾಧಿಸಬೇಕಾದ ಏಕೈಕ ಸಿದ್ಧಿಯೆಂದರೆ ಜ್ಞಾನ. 'ನ ಹಿ ಜ್ಞಾನೇನ ಸದೃಶಂ' ಎಂಬುದು ಗೀತಾಚಾರ್ಯರ ವಿವೇಕವಾಣಿ. 'Knowledge is Power' ಎಂಬುದು ಪಾಶ್ಚಾತ್ಯರ ನಂಬಿಕೆ. ಜಗತ್ತಿನಲ್ಲಿ ಜ್ಞಾನಕ್ಕಿರುವ ಬೆಲೆ ಬೇರೆ ಯಾವುದಕ್ಕೂ ಇಲ್ಲ. ಜ್ಞಾನವೇ ಆತ್ಮ ಹಾಗೂ ಪರಮಾತ್ಮ. ಜೀವನ್ಮುಕ್ತಿಯ ಸಾಧನವೂ ಅದೇಯೇ.

"ಚಿಂತನೆ, ಕಲ್ಪನೆ, ಓದು, ನೋಟ ಜ್ಞಾನದ ತಲ ಕಾವೇರಿಗಳು. ಓದು ಮತ್ತು ನೋಟ ಚಿಂತನೆ ಹಾಗೂ ಕಲ್ಪನೆಯನ್ನು ಪ್ರಚೋದಿಸುತ್ತವೆ, ಹಾಗೂ ಸಂಸ್ಕರಿಸುತ್ತವೆ. ಆದ್ದರಿಂದ ಜೀವನದಲ್ಲಿ ಈ ಎರಡಕ್ಕೂ ಪ್ರಥಮ ಪ್ರಾಶಸ್ತ್ಯ ಲಭಿಸಬೇಕು."[೧]

ಜೀವನ ವಿಧಾನ ಸಾಧನೆ ಸಿದ್ಧಿಗಳು ಪ್ರಾಂತ್ಯದಿಂದ ಪ್ರಾಂತ್ಯಕ್ಕೆ, ದೇಶದಿಂದ ದೇಶಕ್ಕೆ ನಾನಾ ಕಾರಣಗಳಿಂದಾಗಿ ವ್ಯತ್ಯಾಸವಾಗುವುದು ಸಹಜವಷ್ಟೆ. ನಿತ್ಯ ವಿಕಾಸಶೀಲವಾದ ಜ್ಞಾನ ಜಗತ್ತಿನಷ್ಟೆ ವಿಸ್ತಾರವಾದದ್ದು, ವೈವಿಧ್ಯಮಯವಾದದ್ದು. ಕೂಪಮಂಡೂಕದಂತಿರುವ ಮಾನವನ ಬದುಕು ಇಂದಿನ ಜಗತ್ತಿನಲ್ಲಿ ನಿಸ್ತೇಜವಾಗುತ್ತದೆ. ಸೊನ್ನೆಯಾಗುತ್ತದೆ. ಮಾನವನ ದೇಹಕ್ಕೆ ಇಂದ್ರಿಯಗಳೇ ಕಿಟಕಿಗಳು. ಅವನ್ನವನು ಯಾವಾಗಲೂ ತೆರೆದಿರಬೇಕು. ಅನ್ಯದೇಶಕ್ಕೆ ಹೋಗಲವಕಾಶವಿಲ್ಲದವರು ಇದ್ದಲ್ಲಿಯೇ ಅಲ್ಲಿಯ ವಿಷಯಗಳನ್ನು ತಿಳಿಯಲು ಸಾಕಷ್ಟು ಸೌಕರ್ಯಗಳಿವೆ. ಪ್ರವಾಸ

---

೧. ದೇಜಗೌರವರ –'ಪ್ರವಾಸಿ ಸಂಭ್ರಮ' ಕೃತಿಯ ಮುನ್ನುಡಿಯಲ್ಲಿ

ಕಥೆಗಳಿಗೆ, ಇತಿಹಾಸ ಗ್ರಂಥಗಳಿವೆ ಮಿಗಿಲಾಗಿ ವಿದ್ಯುನ್ಮಾಧಮಗಳಿವೆ. ಇವೆಲ್ಲವೂ ಜ್ಞಾನ ಸಂಪಾದನೆಯ ಮಾರ್ಗಗಳು.

ಮನರಂಜನೆ ಅಥವಾ ನಿರ್ಧಿಷ್ಟ ಕಾರ್ಯ ಸಾಧನೆಯಷ್ಟೆ ಪ್ರವಾಸದ ಗುರಿಯಲ್ಲ. ತಾನು ನೋಡಿದ್ದನ್ನು, ಅನುಭವಿಸಿದ್ದನ್ನು ತನ್ನ ನೆರೆಹೊರೆಯವರೊಂದಿಗೆ, ತನ್ನ ಜನಕ್ಕೆ ಹಂಚಬೇಕಾದದ್ದು ಅವನ ಕರ್ತವ್ಯ. ಪ್ರವಾಸ ಸಾಹಿತ್ಯ ದೂರದರ್ಶನದ ಪೆಟ್ಟಿಗೆಯಂತೆ ಮನರಂಜನೆಯ ಮಾರ್ಗವೂ ಹೌದು, ಜ್ಞಾನದ ಮಾರ್ಗವೂ ಹೌದು. ಒಂದು ರೀತಿಯಲ್ಲಿ ಅದೊಂದು ದೂರಶಿಕ್ಷಣ ವ್ಯವಸ್ಥೆಯೂ ಹೌದು ಎಂದು ದೇಜಗೌರವರ ಮಾತಿನಲ್ಲಿ ಪ್ರವಾಸ ಸಾಹಿತ್ಯದ ಮಹತ್ವವನ್ನು ಮತ್ತು ಪ್ರವಾಸಿಗನ ಕರ್ತವ್ಯವನ್ನು ನೋಡಬಹುದಾಗಿದೆ.

ಪ್ರವಾಸ ಸಾಹಿತ್ಯ ಇಂದು ಪ್ರಪಂಚದ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿದ್ದು, ಕನ್ನಡದಲ್ಲಿಯೂ ಒಂದು ಸಾಹಿತ್ಯದ ಪ್ರಕಾರವಾಗಿ ರೂಪುಗೊಂಡಿದೆ. ವಿಶೇಷವಾಗಿ ದೇಜಗೌರವರ ಪ್ರವಾಸ ಸಾಹಿತ್ಯ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ.

"ಪ್ರೊ.ದೇಜಗೌರವರ ಪ್ರವಾಸಿ ಸಾಹಿತ್ಯ" ಎಂಬ ನಿಬಂಧದ ವ್ಯಾಪ್ತಿಯಲ್ಲಿ ದೇಜಗೌರವರು ಪ್ರವಾಸಿ ಸಾಹಿತ್ಯಕ್ಕೆ ನೀಡಿದ ಕೊಡುಗೆ ಮತ್ತು ಅವರ ಸಾಹಿತ್ಯದ ನೆಲೆ-ಬೆಲೆಯನ್ನು ಹಲವು ವಿದ್ವಾಂಸರ ಅಭಿಪ್ರಾಯದ ಹಿನ್ನಲೆಯಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

ಪ್ರವಾಸ ಸಾಹಿತ್ಯದ ಅರ್ಥ, ಮೂಲ, ಲಕ್ಷಣಗಳು, ಬೆಳೆದು ಬಂದ ರೀತಿ, ದೇಜಗೌರವರ ಪ್ರವಾಸ ಸಾಹಿತ್ಯದ ಪರಿಚಯ ಮತ್ತು ಸಾಹಿತ್ಯದೊಳಗಿನ ವಿಶೇಷತೆಯನ್ನು ತಿಳಿಸಲಾಗಿದೆ.

ದೇಜಗೌವರವರ 'ವಿಸ್ಮಯಗಳ ನಾಡಿನಲ್ಲಿ' ಪ್ರವಾಸ ಕೃತಿಯಲ್ಲಿನ ನೂತನ ಅಭಿವ್ಯಕ್ತಿ ತಂತ್ರ; ಭಾರತ ಮತ್ತು ಅಮೇರಿಕಗಳ ತೌಲನಿಕ ಅಧ್ಯಯನ, ಅಲ್ಲಿನ ಗುಣಾವಗುಣಗಳ ದೃಷ್ಟಿಕೋನದಿಂದ ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ.

'ನಿಚ್ಚಹಸುರಿನ ನಾಡಿನಲ್ಲಿ' ಕಥನವನ್ನು ಅಲ್ಲಿನ ಇತಿಹಾಸ, ಸೌಂದರ್ಯ, ಹಳ್ಳಿ–ರೈತ, ಸಾಂಸ್ಕೃತಿಕ ದೃಷ್ಟಿಕೋನದಿಂದ ಮತ್ತು 'ಹಳದಿ ಕಲ್ಲಿನ ಉದ್ಯಾನ' ಕಥನದ ಹಲವು ವಿಸ್ಮಯಗಳನ್ನು ಸಂಶೋಧನಾತ್ಮಕವಾಗಿ ಚರ್ಚಿಸಲಾಗಿದೆ. ಹಾಗೂ ಅನೇಕ ವಿದ್ವಾಂಸರ ಅಭಿಪ್ರಾಯದಲ್ಲಿ ದೇಜಗೌರವರ ಪ್ರವಾಸ ಸಾಹಿತ್ಯದ ಮಹತ್ವವನ್ನು ಎತ್ತಿಹಿಡಿಯಲಾಗಿದೆ.

ಅಲ್ಲದೆ ಪ್ರವಾಸ ಸಾಹಿತ್ಯ ಕೇವಲ ಮನರಂಜನೆಯ ಮಾರ್ಗವಲ್ಲ, ಜ್ಞಾನ ಸಂಪಾದನೆಯ ಮಾರ್ಗವೂ ಆಗಿದೆ ಎಂಬುದನ್ನು ಗಮನದಲ್ಲಿಟ್ಟುಕೊಂಡು ಈ ನಿಬಂಧವನ್ನು ಪೂರ್ಣ ಮಾಡಲು ಪ್ರಯತ್ನಿಸಿದ್ದೇನೆ.

# ಅಧ್ಯಾಯ ಎರಡು

# ಪ್ರವಾಸ ಸಾಹಿತ್ಯದ ಅರ್ಥ, ಲಕ್ಷಣಗಳು, ಪ್ರಕಾರಗಳು ಮತ್ತು ನಡೆದು ಬಂದ ದಾರಿ

ಮನುಷ್ಯ ಸ್ವಭಾವತಃ ಅಲೆಮಾರಿ. ಅವನು ಆದಿಮಾನವನಾಗಿ ಕಾಡಿನಲ್ಲಿ ವಾಸಮಾಡುತ್ತಿದ್ದಾಗ ಗುಹೆಯಿಂದ ಗುಹೆಗೆ, ಕಾಡಿನಿಂದ ಕಾಡಿಗೆ, ಸ್ಥಳದಿಂದ ಸ್ಥಳಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಸಂಚಾರಿಸುತ್ತಿದ್ದನೆಂದು ಮಾನವ ಶಾಸ್ತ್ರಜ್ಞರು ಹೇಳುತ್ತಾರೆ. ಅವನು ಈ ಸಂಚಾರಕ್ಕೆ ಅನೇಕ ಕಾರಣಗಳು ಇರುತ್ತಿದ್ದವು. ತನ್ನ ಕುತೂಹಲವನ್ನು ತಣಿಸಿಕೊಳ್ಳಲು ಆಹಾರದ ಅನ್ವೇಷಣೆಗಾಗಿ ಹಾಗೂ ಒಂದೆ ಕಡೆ ಇರುವ ಬೇಸರದಿಂದ ತಪ್ಪಿಸಿಕೊಳ್ಳಲು ಸ್ಥಳ ಬದಲಾವಣೆ ಮಾಡುತ್ತಿದ್ದನೆಂದು ಅಭಿಪ್ರಾಯವು ಇದೆ. ಮುಂದೆ ಇದನ್ನು ದನ, ಕರು ಪ್ರಾಣಿ ಪಕ್ಷಿಗಳನ್ನು ಸಾಕಿದ ಮೇಲೆ ಅವುಗಳಿಗೆ ಮೇವು, ನೀರು ದೊರೆಯುವ ಸ್ಥಳಗಳಿಗೆ, ಜೊತೆಗೆ ತನಗೆ ಆಹಾರ ದೊರೆಯುವ ಸ್ಥಳಗಳಿಗೆ ವಲಸೆ ಹೋಗುತ್ತಿದ್ದನು. ಒಟ್ಟಿನಲ್ಲಿ ಮನುಷ್ಯ ಸ್ವಭಾವತಃ ಸಂಚಾರಿ ಮನೋಧರ್ಮದವನು.

ಮುಂದೆ ತಾನು ಸಾಕಿದ ಪ್ರಾಣಿಗಳಿಗೊಸ್ಕರ ನದಿ ತೀರದಲ್ಲಿ ಬೆಟ್ಟ ಕಣಿವೆಗಳಲ್ಲಿ ನೆಲೆ ನಿಂತನು ಹೀಗೆ ಮನುಷ್ಯ ನೆಲೆ ನಿಂತ ಜಾಗಗಳು ಹಲವಾರು ಇವೆ. ಅನಂತರ ಮನೆಗಳಾಗಿ ಹಳ್ಳಿಗಳಾದವು, ಹಲವು ಹಳ್ಳಿಗಳು ನಗರಗಳಾದವು, ಅಲ್ಲೇನಿದೆ ಎಂಬುದನ್ನು ನೋಡವಂತ ಕೂತುಹಲ ಅವನಲ್ಲಿ ನೆಲೆಯಾಗಿ ನಿಂತಿತು. ಆದುದರಿಂದ ತನಗೆ ಬಿಡುವಿದ್ದಾಗ ದುಡಿದು ಬೇಸರವಾದಾಗ ಹೊಸ ಜಾಗಗಳನ್ನು ನೋಡಿ ಬರುವ ಪರಿಪಾಠವನ್ನು ಅವನು ಮಾಡಿಕೊಂಡ ಮುಂದೆ ಅವನು ನಾಗರೀಕನಾದಂತೆಲ್ಲಾ, ಜನಸಂಖ್ಯೆ ಬೆಳೆದಂತೆಲ್ಲಾ ಹೊಸ ಹೊಸ ಜಾಗಗಳನ್ನು ಹುಡುಕಿಕೊಂಡು ಹೋಗುವ ಪ್ರವೃತ್ತಿ ಬೆಳೆಯಿತು. ಇದು ವಿಶೇಷವಾಗಿ ಪಾಶ್ಚಿಮಾತ್ಯ ಭಾಗದಲ್ಲಿ ವಾಸ ಮಾಡುತ್ತಿದ್ದ ಮನುಷ್ಯರಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.

ಜಗತ್ತಿನ ಅನೇಕರು ನಾನಾ ದೇಶಗಳನ್ನು ನೋಡಲು ಹೋಗಿದ್ದು ಉಂಟು ಹೀಗೆ ಹೋದ ಕೆಲವೇ ಕೆಲವರು ಬದುಕುಳಿದು ಬಂದರು. ಅವರಲ್ಲಿ ಕೆಲವರು ಅಲ್ಲಿನ ತಮ್ಮ ಅನುಭವಗಳನ್ನು ಕಂಡಿದ್ದನ್ನು, ಕೇಳಿದ್ದನ್ನು, ಅಲ್ಲಿನ ಜನ ಜೀವನ, ಸಂಸ್ಕೃತಿ,

ಭಾಷೆಗಳನ್ನು, ರೀತಿ ನೀತಿಗಳನ್ನು ಬರೆದಿಟ್ಟಿರುವ ಸಾಹಿತ್ಯ ವಿಫುಲವಾಗಿದೆ. ಹೀಗೆ ಪ್ರವಾಸ ಸಾಹಿತ್ಯದ ಮೂಲ ಆರಂಭವಾದಂತೆ ಕಾಣುತ್ತದೆ.

ಪ್ರಯಾಣ ಸೌಲಭ್ಯಗಳು ಇಲ್ಲದಿದ್ದ ಕಾಲದಲ್ಲಿ ಆ ಜನಗಳು ನಡೆಸಿರುವ ಸಾಹಸ ನಿಜಕ್ಕೂ ಅತ್ಯಪೂರ್ವವಾದುದ್ದು. ಇತಿಹಾಸವನ್ನು ಗಮನಿಸಿದರೆ, ಮಾನವಶಾಸ್ತ್ರ, ಸಮಾಜಶಾಸ್ತ್ರ, ಇತ್ಯಾದಿಗಳನ್ನು ಪರಿಶೀಲಿಸಿದರೆ ಕೆಲವು ಸಾಹಸಿಗಳು ಹೊಸ ಹೊಸ ಭೂಭಾಗಗಳನ್ನು ಕಂಡುಹಿಡಿಯಲು ಹೊಸ ಪ್ರದೇಶಗಳಲ್ಲಿ ವ್ಯಾಪಾರ ಮಾಡಲು ತಮ್ಮ ಅನುಯಾಯಿಗಳೊಂದಿಗೆ ಪ್ರವಾಸ ಮಾಡಿರುವುದು ಉಂಟು. ಹೀಗೆ ಪ್ರವಾಸ ಮಾಡಿದವರಲ್ಲಿ ಪಾಶ್ಚಿಮಾತ್ಯರದ್ದೇ ಮೇಲುಗ್ಯೆ. ಅವರು ಜಗತ್ತಿನ ನಾನಾ ಪ್ರದೇಶಗಳಿಗೆ, ಕಗ್ಗತ್ತಲೆ ಖಂಡ ಎಂದು ಕರೆಯುವ ಆಪ್ರಿಕಾದೊಳಗೂ ಕೂಡ ಪ್ರವಾಸ ಮಾಡಿ ಬಂದಿದ್ದಾರೆ.

ಬುದ್ದನಿಗೆ ಸಂಬಂದಪಟ್ಟ ಗ್ರಂಥಗಳನ್ನು ಸಂಗ್ರಹಿಸಲು ಚೀನಾ ದೇಶದ ಇಬ್ಬರು ಯಾತ್ರಿಕರು ಫಾಹಿಯಾನ ಮತ್ತು ಹೂಯನ್‌ತ್ಸಾಂಗ್ ಪ್ರಾಚೀನ ಕಾಲದಲ್ಲಿ ಬಂದು ಹೋದಂತಹ ಅನೇಕ ಪ್ರವಾಸಿಗರ ಪ್ರವಾಸ ಕಥನಗಳು ದೊರೆಯುತ್ತವೆ. ಈ ಪ್ರವೃತ್ತಿ ಮನುಷ್ಯನ ಸ್ವಭಾವದಲ್ಲೇ ಸೇರಿಕೊಂಡಿರುವುದರಿಂದ ಇಂದಿಗೂ ದೇಶವಿದೇಶಗಳನ್ನ ನೋಡುವಂತಹ ಹವ್ಯಾಸ ಜನರಲ್ಲಿ ಉಳಿದುಕೊಂಡು ಬಂದಿದೆ. ಈಗ ವಿಮಾನ ಚಲಾವಣೆ ಬಂದ ನಂತರವಂತೂ ಪ್ರವಾಸ ಸುಲಭವಾಗುತ್ತಿದೆ.

ಹೀಗೆ ಪ್ರವಾಸವು ಒಬ್ಬ ಮನುಷ್ಯ ಅಧಿಕಾರ ನಿಮಿತ್ತವಾಗಿ, ಪದನಿಮಿತ್ತವಾಗಿ ಬೇರೆ ಬೇರೆ ದೇಶಗಳಿಗೆ ಹೋಗುವ ಪದ್ಧತಿ ಆಧುನಿಕಯುಗದಲ್ಲಿ ಪ್ರಾರಂಭವಾಗಿದೆ. ಪಶ್ಚಿಮ ದೇಶಗಳಿಂದ ನಮ್ಮ ದೇಶ ಭಾರತಕ್ಕೆ ಅಸಂಖ್ಯಾತ ಪ್ರವಾಸಿಗರು ಬಂದು ಹೋಗಿರುವುದನ್ನು ಕಾಣಬಹುದು. ಹಿಂದೆ ದೋಣಿಗಳಲ್ಲೋ, ಅವರೇ ತಯಾರಿಸಿದ ಹಡಗುಗಳಲ್ಲೋ, ವಾರ ತಿಂಗಳು ವರ್ಷಗಂಟಲೇ ಪ್ರಯಾಣ ಮಾಡಿ ಇನ್ನೊಂದು ದೇಶಕ್ಕೆ ತಲುಪಬೇಕಾಗಿತ್ತು. ಈಗ ಈ ಪ್ರವಾಸ ಎಷ್ಟು ಸುಲಭವಾಗಿದೆ ಎಂದರೆ ಜೇಬಿನಲ್ಲಿ ಹಣವೊಂದಿದ್ದರೆ ಒಂದು ದಿನಕ್ಕೆ ಸಾವಿರಾರು ಮ್ಯೆಲಿ ಇರುವ ದೇಶಕ್ಕೆ ಹೋಗಬಹುದು. ಸಂಪರ್ಕಮಾಧ್ಯಮಗಳು ಬೆಳೆದಿರುವುದರಿಂದ ಜಗತ್ತಿನ ಯಾವುದೇ ಪ್ರದೇಶವನ್ನು ನಾವು ಕೂತಲ್ಲಿಯೇ ನೋಡಬಹುದಾಗಿದೆ. ಆದರೂ ಪ್ರತ್ಯಕ್ಷವಾಗಿ ಹೋಗಿ

ನೋಡುವ ಅನುಭವ ಇವೆಲ್ಲಕ್ಕಿಂತ ಉತ್ತಮ ಎಂದು ನಂಬಿದ ಕೆಲವರು ನಾನಾ ಕಾರಣಗಳಿಗಾಗಿ ಜಗತ್ತಿನ ನಾನಾ ಭಾಗಗಳಿಗೆ ಹೋಗಿ ಬಂದಿದ್ದಾರೆ.

## ೧. ಪ್ರವಾಸ ಸಾಹಿತ್ಯದ ಅರ್ಥ

ಪ್ರವಾಸದ ಹಿಂದಿನ ದಿನಗಳಲ್ಲಿ ಅನೇಕ ಅರ್ಥಗಳನ್ನ ತನ್ನ ಗರ್ಭದಲ್ಲಿ ಅಡಗಿಸಿಕೊಂಡಿದೆ. ಇಂದಿನ ಪ್ರವಾಸ ಅನಂತಮುಖಿಯಾದದ್ದು, ಹಾಗೂ ಅನೇಕ ಉದ್ದೇಶಗಳನ್ನು ಒಳಗೊಂಡಿರುವಂತಹದು. ಈ ಕಾರಣದಿಂದಾಗಿಯೇ ಪ್ರವಾಸಿಗನ ಉದ್ದೇಶ, ಮನೋವೃತ್ತಿ, ಹಾಗೂ ಪ್ರವೃತ್ತಿಗಳನ್ನು ಅವಲಂಬಿಸಿ ಪ್ರವಾಸ 'ಸುಖ'1 ನಿಂತಿದೆ ಎನ್ನುತ್ತಾರೆ ಹಲವರು. ಪ್ರವಾಸದ ಅನುಭವಗಳನ್ನು ಲಾಭಗಳನ್ನು ಗಮನದಲ್ಲಿರಿಸಿಕೊಂಡ ಹಲವರು "ಕೋಶ ಓದು, ದೇಶ ನೋಡು" ಎಂಬ ನಾಣ್ಣುಡಿಯ ಮಹತ್ವವನ್ನು ಅರಿತ್ತಿದ್ದಾರೆ. ಅಧ್ಯಯನ, ಜ್ಞಾನಸಂಪಾದನೆ, ವ್ಯಾಪಾರ, ರಾಜಕೀಯ, ಉದ್ಯೋಗ, ಮನೋರಂಜನೆ, ವಿಹಾರ ಇತ್ಯಾದಿ ಯಾವುದೇ ಬೇಕಾದರೂ ಪ್ರವಾಸಿಗನ ಧೇಯವಾಗಿರಬಹುದು. ಆದರೆ ಪ್ರವಾಸ ಉದ್ದೇಶಿತವು ನಿಯೋಜಿತವು ಆಗಿದ್ದು ಪಕ್ಷದಲ್ಲಿ ಮಾತ್ರ ಅದು ಆನಂದದಾಯಿಯಾಗುವುದರ ಜೊತೆ ಲಾಭದಾಯಕವಾಗುತ್ತದೆ.. ಆದರೂ ಉದ್ದೇಶರಹಿತವಾದ ಪ್ರವಾಸವೇ ಸಂತೋಷದಾಯಕವಾಗಿರುತ್ತದೆ. ಎಂಬುದು ಹಲವರ ಅಭಿಪ್ರಾಯ. ಜಾನ್ ಮಾರ್ಷ ಫೀಲ್ಡ್ ಹೇಳುವಂತೆ "It is good to be out on the round and going one knows not where"೨ ಎಂದರೆ ಗೊತ್ತುಗುರಿ ಇಲ್ಲದೆ ಪ್ರವಾಸ ಹೊರಡುವುದರಲ್ಲಿ ಅಭೂತಪೂರ್ವವಾದಂತಹ ಸಂತೋಷ ಕೊಡುತ್ತದೆ. ಎಂಬುದರಿಂದ ಪ್ರವಾಸದ ಮಹತ್ವವನ್ನು ಅರಿಯಬಹುದು.

ವ್ಯಕ್ತಿಯೊಬ್ಬರು ನಿರ್ದಿಷ್ಟವಾದ ಉದ್ದೇಶವನಿಟ್ಟುಕೊಂಡು, ನಿರ್ದಿಷ್ಟ ಮಾರ್ಗದಲ್ಲಿ ಪ್ರಯಾಣಿಸಿ ಸ್ಥಳಗಳನ್ನು ಸಂದರ್ಶಿಸುವುದನ್ನು ಪ್ರವಾಸ ಎನ್ನಬಹುದು. ಸಾಮಜಿಕ, ಶೈಕ್ಷಣಿಕ, ಧಾರ್ಮಿಕ ಉದ್ದೇಶಗಳನ್ನಿರಿಸಿಕೊಂಡು ವಿವಿಧ ಪ್ರದೇಶಗಳನ್ನು ಸಂದರ್ಶಿಸುತ್ತಾ, ಅಲ್ಲಿ ತಾವು ಕಂಡ ಅನಿಭವಿಸಿದ ವಿಚಾರಗಳು ಮತ್ತು ಅನುಭವಗಳನ್ನು ಬರವಣಿಗೆಯ ರೂಪದಲ್ಲಿ ವರ್ಣನಾತ್ಮಕವಾಗಿ ದಾಖಲಿಸುವುದೇ ಪ್ರವಾಸ ಸಾಹಿತ್ಯ.

ಪ್ರವಾಸ ಕಥನಗಳು ಅಮೂಲ್ಯ ದಾಖಲೆಗಳಾಗಿದ್ದು ಓದುಗರಿಗೆ ಆ ಪ್ರವಾಸ ಸ್ಥಳಗಳ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡುತ್ತವೆ, 'ದೇಶನೋಡು ಕೋಶ ಓದು'

ಎಂಬಂತೆ ಎಲ್ಲರೂ ಎಲ್ಲಾ ಸ್ಥಳಗಳನ್ನು ಸಂದರ್ಶಿಸಲು ಸಾಧ್ಯವಿಲ್ಲ. ಆದಕಾರಣ ಈ ಪ್ರವಾಸ ಕಥನಗಳು ನಮಗೆ ತಿಳಿಯದೆ ನೋಡಿರದ ಎಷ್ಟೋ ಸ್ಥಳಗಳ ಪರಿಚಯ ಮಾಡಿಕೊಡುತ್ತವೆ. ಅಥವಾ ಆ ಸ್ಥಳಗಳನ್ನು ಸಂದರ್ಶಿಸಲು ಇಚ್ಛಿಸುವವರಿಗೆ ಮಾರ್ಗದರ್ಶಕಗಳಾಗುತ್ತವೆ.

ಪ್ರವಾಸ ಹೋದವರಲ್ಲಿ ಅಥವಾ ಹೋಗುವವರಲ್ಲಿ ಲೇಖಕರ ಪ್ರವೃತ್ತಿ ಇರುವಂತಹವರು ತಮ್ಮ ಅನುಭವಗಳನ್ನು ಬರೆದಿಡುವುದುಂಟು. ಈ ಹಿನ್ನಲೆಯಲ್ಲಿ ಪ್ರವಾಸ ಕಥನ ಬರೆಯುವ ಲೇಖಕನು ಹೆಚ್ಚು ಹೊಣೆ ಹೊತ್ತಿರುತ್ತಾನೆ. ಈ ಲೇಖಕ ಸೂಕ್ಷ್ಮಗ್ರಾಹಿಯಾಗಿರಬೇಕು. ಭಾವನೆಗಿಂತ ವಿಷಯಕ್ಕೆ, ಭಾಷೆಗಿಂತ ನಿರೂಪಣೆಗೆ ಪ್ರಾಮುಖ್ಯತೆ ನೀಡಬೇಕು. ತಾನು ಕಂಡ ಮತ್ತು ಅನುಭವಿಸಿದ ವಿಚಾರಗಳನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಬೇಕು.

'ಪ್ರವಾಸ ಕೇವಲ ಬಾಹ್ಯಾಕಾಶಕ್ಕೆ ಮಾತ್ರವಲ್ಲ, ಕಾಲ ಗರ್ಭದೊಳಕ್ಕೆ ಹಾಗು ನಮ್ಮ ಮನಸ್ಸು ಹಾಗೂ ಸ್ಮರಣೆಯ ವಲಯಕ್ಕೆ ಮಾಡಿದ ವಿಹಾರ. ಅಲ್ಲದೆ ಪ್ರವಾಸ ವೀಕ್ಷಣೆಗೆ ಮಾತ್ರವಲ್ಲದೆ ಸಂಸ್ಮರಣೆಗೆ ಹಾಗು ಮನನಶೀಲತೆಗೆ ಅವಾಕಾಶವನ್ನು ಒದಗಿಸುತ್ತದೆ.'೩ ಎಂದು ಕೆ.ಪಿ.ಎಸ್ ಮೆನನ್ ರವರು ಪ್ರವಾಸದ ಪ್ರಮುಖ್ಯತೆಯನ್ನು ತಿಳಿಸುತ್ತಾರೆ.

ಪ್ರವಾಸ ಸಾಹಿತ್ಯದಿಂದ ಓದುಗನಿಗೆ ವಿವಿಧ ಜನಜೀವನ, ಕಲೆ, ವಾಸ್ತುಶಿಲ್ಪ, ಸ್ಥಳಗಳು, ಪ್ರಕೃತಿ ಸಂಪತ್ತು, ಸಾರಿಗೆ, ಬೌಗೋಳಿಹ ಅಂಶಗಳು, ಐತಿಹಾಸಿಕ ಘಟನೆಗಳು, ದಂತಕಥೆಗಳು, ಕೃಷಿ, ವ್ಯಾಪಾರ, ಕೈಗಾರಿಕೆ, ಜನರ ಆಚಾರ ವಿಚಾರಗಳು, ಹೀಗೆ ಒಂದು ಸಂಸ್ಕೃತಿಯ ದರ್ಶನವಾಗುತ್ತದೆ. ಪ್ರವಾಸ ಕೈಗೊಂಡಾಗ ಆಗುವ ಆನಂದ ಸ್ವಲ್ಪಭಾಗವಾದರೂ ಪ್ರವಾಸ ಕಥನ ಓದುವುದರಿಂದ ದೊರೆಯುತ್ತದೆ.

## ೨. ಪ್ರವಾಸ ಸಾಹಿತ್ಯದ ಲಕ್ಷಣಗಳು

೧. ಪ್ರವಾಸ ಸಾಹಿತ್ಯ ಸೃಜನಶೀಲವಾದದ್ದು.

೨. ಪ್ರವಾಸ ಸಾಹಿತ್ಯ ಉತ್ತಮ ಮಾರ್ಗದರ್ಶಕನಿದ್ದಂತೆ.

೩. ಪ್ರವಾಸ ಸಾಹಿತ್ಯ ಮನರಂಜನೆಯ ಮಾತ್ರವಲ್ಲದೆ, ಜ್ಞಾನವನ್ನು ನೀಡುತ್ತದೆ.

೪. ಪ್ರವಾಸ ಸಾಹಿತ್ಯಕ್ಕೆ ಆಕರ್ಷಣೆಯ ಗುಣವಿದೆ.

೫. ಪ್ರವಾಸ ಸಾಹಿತ್ಯ ಕುತೂಹಲವನ್ನು ಹೆಚ್ಚಿಸುತ್ತದೆ.

೬. ಪ್ರವಾಸ ಸಾಹಿತ್ಯ ಒಬ್ಬ ಮಾಹಿತಿದಾರನಂತೆ ಕೆಲಸ ಮಾಡುತ್ತದೆ.

೭. ಪ್ರವಾಸ ಸಾಹಿತ್ಯ ವೈವಿಧ್ಯದೊಳಗೆ ಬಹುತ್ವವನ್ನು ಹುಡುಕುವಂತದ್ದು.

೮. ಪ್ರವಾಸ ಸಾಹಿತ್ಯ ವಿವಿಧ ಜನರ ಆಚಾರ ವಿಚಾರಗಳನ್ನು, ಅವರ ಸಂಸ್ಕೃತಿಯ ದರ್ಶನ ನೀಡುವಂತ್ತದ್ದಾಗಿದೆ.

೯. ಪ್ರವಾಸ ಸಾಹಿತ್ಯ ಅನುಭವಗಳ ಬುತ್ತಿಯಂತೆ.

೧೦. ಪ್ರವಾಸ ಸಾಹಿತ್ಯ ಚಿಂತನೆ ಹಾಗೂ ಕಲ್ಪನೆಯನ್ನು ಪ್ರಚೋದಿಸುತ್ತದೆ.

೧೧. ಪ್ರವಾಸ ಸಾಹಿತ್ಯ ಸೌಂದರ್ಯ ಪ್ರಜ್ಞೆಯನ್ನು ಮುಡಿಸುವಂತ್ತದ್ದು.

೧೨. ಪ್ರವಾಸ ಸಾಹಿತ್ಯ ಶೈಕ್ಷಣಿಕ ಗುಣವನ್ನು ಹೊಂದಿದೆ.

೧೩. ಪ್ರವಾಸ ಸಾಹಿತ್ಯ ಸಂಶೋಧನಾ ಗುಣವನ್ನು ಹೆಚ್ಚಿಸುತ್ತದೆ.

೧೪. ಪ್ರವಾಸ ಸಾಹಿತ್ಯ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯನ್ನು ತಿಳಿಸುತ್ತದೆ

೧೫. ಪ್ರವಾಸ ಸಾಹಿತ್ಯ ಮಕ್ಕಳಲ್ಲಿ ಸುಪ್ತ ಪ್ರತಿಭೆಯನ್ನು ಎಚ್ಚರಿಸುತ್ತದೆ ಮತ್ತು ಆಲೋಚನಾ ಸಾಮರ್ಥ್ಯವನ್ನು ಬೆಳೆಸುತ್ತದೆ.

## ೩. ಪ್ರವಾಸ ಸಾಹಿತ್ಯದ ಪ್ರಕಾರಗಳು

ಪ್ರವಾಸ ಸಾಹಿತ್ಯದಲ್ಲಿ ಹಲವು ಪ್ರಕಾರಗಳನ್ನು ಗುರುತಿಸಬಹುದಾಗಿದೆ. ಪ್ರವಾಸ ಕೈಗೊಳ್ಳುವ ಉದ್ದೇಶದ ಆಧಾರದ ಮೇಲೆ ಈ ಕೆಳಗಿನಂತೆ ವಿಂಗಡಿಸಬಹುದಾಗಿದೆ.

೧. ಮನರಂಜನ ಪ್ರವಾಸ

೨. ವ್ಯವಹಾರಿಕ ಪ್ರವಾಸ

೩. ಭಕ್ತಿ ಪ್ರವಾಸ (ಆಧ್ಯಾತ್ಮ ಪ್ರವಾಸ)

೪. ರಾಜಕೀಯ ಪ್ರವಾಸ

೫. ಅಂತರೀಕ್ಷ ಪ್ರವಾಸ

ಒಂದು ಸ್ಥಳವು ಬೇಸರವಾದಗ ಮತ್ತೊಂದು ಸ್ಥಳಕ್ಕೆ ಹೋಗಿ ತನ್ನ ಬೇಸರವನ್ನು ತಗ್ಗಿಬರುವಂತದ್ದು ಹಿಂದಿನಿಂದಲೂ ನಡೆಯುತ್ತಿದೆ. ಇಂದೂ ಕೂಡ ಅನೇಕರು ಹಲವು

ಉದ್ದೇಶವನ್ನು ಇಟ್ಟುಕೊಂಡು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ಬರುವುದನ್ನು ಕಾಣಬಹುದಾಗಿದೆ.

ಒಬ್ಬ ವ್ಯಕ್ತಿ ಮನರಂಜನೆಯ ಉದ್ದೇಶದಿಂದ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವುದನ್ನು ಮನರಂಜನ ಪ್ರವಾಸ ಎಂದು ಕರೆಯಬಹುದು. ಈ ಪ್ರವಾಸವನ್ನು ಮಾಡುವ ವ್ಯಕ್ತಿಯು ಲೇಖಕ ಗುಣವನ್ನು, ಸೌಂದರ್ಯ ಪ್ರಜ್ಞೆಯನ್ನು, ಹಾಗೂ ಆಸ್ವಾದಿಸುವ ಗುಣವನ್ನು ಹೊಂದಿರುತ್ತಾರೆ. ಈ ಪ್ರವಾಸ ಒಂದು ಮಾರ್ಗವನ್ನು ಹೊಂದಿದ್ದು, ಶಿಕ್ಷಣ ಸಂಸ್ಥೆಗಳಲ್ಲಿ ಕೈಗೊಳ್ಳುವ ಶೈಕ್ಷಣಿಕ ಪ್ರವಾಸವು ಇದರ ವ್ಯಾಪ್ತಿಯಲ್ಲಿ ಬರುತ್ತದೆ. ಮನರಂಜನೆಯ ಜೊತೆಗೆ ಶಿಕ್ಷಣವನ್ನು ನೀಡುತ್ತದೆ. ಈ ಪ್ರವಾಸ ಬಹುದ್ದೇಶವನ್ನು ಹೊಂದಿದ್ದು, ಕೈಗೊಳ್ಳುವ ವ್ಯಕ್ತಿಯು ಹಲವು ಸ್ಥಳಗಳಿಗೆ ಭೇಟಿ ನೀಡಿ ಮನರಂಜನೆಯನ್ನು ಪಡೆಯುತ್ತಾನೆ. ಎಲ್ಲಾ ವಯಸ್ಸಿನವರಲ್ಲಿ ಕಾಣಬಹುದು. ಮಕ್ಕಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ.

ಒಬ್ಬ ವ್ಯಕ್ತಿಯು ತನ್ನ ವ್ಯವಹಾರದ ದೃಷ್ಟಿಯಿಂದ ಇಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ಬರುವುದನ್ನು ವ್ಯವಹಾರಿಕ ಪ್ರವಾಸ ಎಂದು ಕರೆಯಬಹುದು. ಇಲ್ಲಿ ವ್ಯಕ್ತಿಯು ಪ್ರವಾಸ ಕೈಗೊಳುವ ಸ್ಥಳ ವ್ಯವಹಾರದ ಸ್ಥಳಗಳ ನಡುವೆ ಮಾತ್ರ ಪ್ರವಾಸ ಸಾಗುತ್ತದೆ. ಇಲ್ಲಿ ಎಕ್ಕೋದ್ದೇಶವನ್ನು ಮಾತ್ರ ಕಾಣಬಹುದಾಗಿದೆ. ಮದ್ಯಮ ವಯಸ್ಸಿನವರಲ್ಲಿ ಈ ಪ್ರವಾಸವನ್ನು ಹೆಚ್ಚು ಕಾಣಬಹುದು.

ಮೋಕ್ಷದಾರಿ, ಮುಕ್ತಿಯ ಮಾರ್ಗ ಎರಡನ್ನು ಪಡೆಯುವ ದೃಷ್ಟಿಯಿಂದ ಹಲವು ದೇವಸ್ಥಾನಗಳಿಗೆ ಹೋಗಿ ಬರುವ ಪ್ರವಾಸವೇ ಭಕ್ತಿ ಪ್ರವಾಸವಾಗಿದೆ. ಇಲ್ಲಿ ಕೇವಲ ದೇವರ ದರ್ಶನಕ್ಕಾಗಿಯೇ ಹೋಗುತ್ತಾರೆ. ವೃದ್ಯಾಪ್ಯದಲ್ಲಿರುವವರು ಈ ಪ್ರವಾಸಕ್ಕೆ ಹೆಚ್ಚುಹೆಚ್ಚು ಹೋಗುತ್ತಾರೆ. ಈ ಪ್ರವಾಸ ಕೈಗೊಳ್ಳುವರಲ್ಲಿ ಆದ್ಯಾತ್ಮಿಕವಾಗಿ ಹೆಚ್ಚು ಆಸಕ್ತಿ ಇರುವುದನ್ನು ನೋಡಬಹುದಾಗಿದೆ.

ಇಂದು ದೇಶದ ರಾಜಕೀಯ ಮುಖಂಡರು ಮತ್ತೊಂದು ದೇಶದ ರಾಜಕೀಯ ಮುಖಂಡರೊಂದಿಗೆ ದೇಶದೇಶಗಳ ನಡುವೆ ಬಾಂದವ್ಯ ವೃದ್ದಿಸಲು, ಒಪ್ಪಂದಗಳಿಗೆ ಸಹಿ ಮಾಡಲು ಹಾಗೂ ಇತರ ಉದ್ದೇಶದಿಂದ ಪ್ರವಾಸ ಮಾಡುವುದನ್ನು ರಾಜಕೀಯ ಪ್ರವಾಸ ಎಂದು ಕರೆಯಬಹುದು. ಇಲ್ಲಿ ಪ್ರವಾಸಕ್ಕೆ ತಗುಲುವ ವೆಚ್ಚವನ್ನು ಸರ್ಕಾರವೇ ಬರಿಸುತ್ತದೆ.

ವಿಜ್ಞಾನಕ್ಕೆ ಸಂಬಂಧಿಸಿದಂತ ಅಂತರೀಕ್ಷದಲ್ಲಿ ಕೆಲವು ಮಾಹಿತಿಯನ್ನು ಕಲೆಹಾಕಲು ಮತ್ತು ಅಧ್ಯಯನ ನಡೆಸಲು ರಾಕೆಟ್‌ಗಳ ಸಹಾಯದಿಂದ ಅಂತರೀಕ್ಷ ನಿಲ್ದಾಣದಲ್ಲಿ ಕೆಲವು ದಿನಗಳು ವಾಸವಿರುವುದು ಅಂತರೀಕ್ಷ ಪ್ರವಾಸವಾಗಿದೆ. ಇತ್ತೀಚೆಗೆ ಭಾರತ ಮೂಲದ ಸುನಿತಾ ವಿಲಿಯಮ್ಸ ೧೯೫ ದಿನಗಳ ಕಾಲ ಅಂತರೀಕ್ಷದಲ್ಲಿ ವಾಸವಿದ್ದುದ್ದನ್ನು ಗಮನಿಸಬಹುದು. ಅಲ್ಲದೆ ಮಂಗಳ ಗ್ರಹಕ್ಕೆ ಪ್ರವಾಸ ಮಾಡಬೇಕೆನ್ನುವ ನಮ್ಮ ವಿಜ್ಞಾನಿಗಳ ಬಹುದಿನದ ಕನಸು ಮುಂದಿನ ದಿನಗಳಲ್ಲಿ ನೆರವೇರುವುದರಲ್ಲಿ ಅನುಮಾನವಿಲ್ಲ.

ಪ್ರವಾಸಕ್ಕೆ ಸಂಬಂಧಿಸಿದಂತೆ ಒಂದು ಇಲಾಖೆ ಇದ್ದು ಪ್ರವಾಸ ಮಾಡುವವರಿಗೆ ಹಾಗೂ ಪ್ರವಾಇಗರನ್ನು ಆಕರ್ಷಿಸುವುದಕ್ಕೆ ಹಲವು ಯೋಜನೆ ಕೈಗೊಂಡು, ಪ್ರವಾಸ ಸ್ಥಳಗಳಿಗೆ ಮೂಲಸೌಕರ್ಯ ನೀಡುವ, ಅಭಿವೃದ್ಧಿ ಪಡಿಸುವ, ಸಂರಕ್ಷಿಸು ಕೆಲಸವನ್ನು ಮಾಡುತ್ತಿದೆ. ಕರ್ನಾಟಕದ ಪ್ರವಸೋದ್ಯಮ ಇಲಾಖೆಯು ಪ್ರವಾಸಿಗರನ್ನು ಆಕರ್ಷಿಸಲು 'ಒಂದು ರಾಜ್ಯ-ಹಲವು ಜಗತ್ತು"-ಕರ್ನಾಟಕ ಎಂಬ ಯೋಜನೆಯನ್ನು ಜಾರಿಗೆ ತಂದಿದ್ದು, ಇದು ಹಲವು ಉದ್ದೇಶವನ್ನು ಹೊಂದಿದೆ.

ಕನ್ನಡದಲ್ಲಿ ಪ್ರವಾಸ ಕಥನವು ಒಂದು ಪ್ರಮುಖ ಸಾಹಿತ್ಯ ಪ್ರಕಾರವಾಗಿದೆ. 1890ರ ದಶಕದ ಕರ್ಕಿವೆಂಕಟರಮಣಶಾಸ್ತ್ರಿ ಅವರ "ದಕ್ಷಿಣ ಭಾರತ ಯಾತ್ರೆ" ಕನ್ನಡದ ಮೊದಲ ಪ್ರವಾಸ ಕೃತಿ ಎನ್ನುವುದಾದರೆ. ಈ ಸಾಹಿತ್ಯ ಪ್ರಕಾರಕ್ಕೆ ಒಂದನೂರು ವರ್ಷಕ್ಕಿಂತ ಹೆಚ್ಚು ವರ್ಷಗಳ ಇತಿಹಾಸ ಇರುವುದನ್ನು ಗುರ್ತಿಸಬಹುದಾಗಿದೆ. ಕರ್ಕಿವೆಂಕಟರಮಣಶಾಸ್ತ್ರಿ ರವರಿಂದ ಆರಂಭವಾದ ಪ್ರವಾಸ ಸಾಹಿತ್ಯ ಸಣ್ಣ ಝರಿಯಂತೆ ಶುರವಾಗಿ ಹೊಳೆಯಂತೆ, ನದಿಯಂತೆ ಹರಿದು ಸಾಗರದಷ್ಟು ಬೆಳೆದಿರುವುದನ್ನು ಗುರುತಿಸಬಹುದು. ಕನ್ನಡದ ಮಹಾಲೇಖಕರಿಂದ ಹಿಡಿದು ಇತ್ತೀಚ್ಚಿನ ಕಿರಿಯ ಲೇಖಕರವರೆಗೆ ಅನೇಕ ಬಗೆಯ ಪ್ರವಾಸ ಸಾಹಿತ್ಯ ರಚನೆಯಾಗಿರುವುದನ್ನು ಕಾಣಬಹುದಾಗಿದ್ದು, ಅವುಗಳಲ್ಲಿ ಅವರ ಪ್ರವಾಸದ ಬದುಕಿನ ಅನುಭವಗಳನ್ನ ಸಹೃದಯರಿಗೆ ಉಣಬಡಿಸಿರುವುದನ್ನು ಕಾಣಬಹುದಾಗಿದೆ. ಕನ್ನಡ ಸಾಹಿತ್ಯದ ಪ್ರಮುಖ ಪ್ರವಾಸ ಕಥನಗಳೆಂದರೆ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 'ಅಮೇರಿಕಾದಲ್ಲಿ ಗೊರೂರು', ಜಿ ಎಸ್ ಶಿವರುದ್ರಪ್ಪನವರ 'ಗಂಗೆಯ ಶಿಖರದಲ್ಲಿ', ಕೆ ಬಿ ಪ್ರಭು ಪ್ರಸಾದ ರವರ 'ದೇಗುಲಗಳ ದಾರಿಯಲ್ಲಿ', ಕೆ ಪಿ ಪೂರ್ಣಚಂದ್ರ ತೇಜಶ್ವಿರವರ 'ಅಲೆಮಾರಿ ಅಂಡಮಾನ್' ಪ್ರಮುಖವಾದವು.

ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ, ಕನ್ನಡದ ಗದ್ಯಶಿಲ್ಪಿ ಎಂದು ಹೆಸರಾದವರೂ, ಜಾನಪದ ತಜ್ಞರು, ಸುಪ್ರಸಿದ್ಧ ಲೇಖಕರು ಆದಂತಹ ಡಾ॥ ಜೆ. ಜವರೇಗೌಡರು ಕುಲಪತಿಯಾಗಿದ್ದಾಗ ಮತ್ತು ಆನಂತರ ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಿಗೆ ಹೋಗಿ ಬಂದಿದ್ದಾರೆ. ಸ್ವಭಾವತಃ ಇವರು ಲೇಖಕರಾದ್ದರಿಂದ ಆಯಾ ದೇಶಗಳಲ್ಲಿ ಕಂಡದ್ದನ್ನು, ಅಲ್ಲಿನ ಸಂಸ್ಕೃತಿಯನ್ನು, ಜನಜೀವನವನ್ನು ಕುರಿತು ಒಂಭತ್ತಕ್ಕೂ ಹೆಚ್ಚು ಪ್ರವಾಸ ಕೃತಿಗಳನ್ನು ರಚಿಸಿದ್ದಾರೆ. ಅವುಗಳನ್ನು ಓದಿದ ಯಾರಾದರೂ ಜನಜೀವನ, ಸಮಾಜ, ರಾಜಕೀಯ, ಶೈಕ್ಷಣಿಕ, ಇವುಗಳನ್ನು ಪ್ರತ್ಯಕ್ಷ ಕಂಡ ಅನುಭವವಾಗದಿರದು. ಪ್ರವಾಸ ಸಾಹಿತ್ಯ ಕೃತಿಗಳು ಕನ್ನಡ ಪ್ರವಾಸ ಸಾಹಿತ್ಯಕ್ಕೆ ಒಂದು ಅಭೂತಪೂರ್ವ ಕೊಡುಗೆ ಎಂದೇ ಹೇಳಬಹುದು.

## ಕೊನೆಟಿಪ್ಪಣಿಗಳು

೧. ಎಂ ವಿಜಯಲಕ್ಷ್ಮೀರವರ – ದೇಜಗೌ ಜೀವನ ಮತ್ತು ಸಾದನೆ ಒಂದು ಅಧ್ಯಾಯನ ಪುಟ ಸಂಖ್ಯೆ–೩೨೩

೨. ಅದೇ, ಪು. ೩೨೩

೩. ಕೆ. ಪಿ. ಎಸ್. ಮೆನನ್‌ರವರ – ವಿಶ್ವ ಪರ್ಯಟನೆ ಕೃತಿಯ ಮುನ್ನುಡಿಯಲ್ಲಿ

# ಅಧ್ಯಾಯ ಮೂರು

# ದೇಜಗೌರವರ ಪ್ರವಾಸ ಸಾಹಿತ್ಯ

ಇಂದು ಮಾನವ ಜಗತ್ತಿನ ಮೇರುಸದೃಶ ಮಾರ್ಗದರ್ಶಕರ ಮುಂಚೂಣಿ-ಯಲ್ಲಿರುವವರಲ್ಲಿ ಪ್ರೊ. ದೇಜಗೌ ಪ್ರಮುಖರು. ಗುರು ಪರಂಪರೆಯಲ್ಲಿ ಆದರ್ಶ ಗುರುವಾಗಿ ಅಗ್ರಸ್ಥಾನ. ವಿಶ್ವಕವಿ ಕುವೆಂಪು ಅವರ ಪರಮಾಪ್ತ ಶಿಷ್ಯರಾಗಿ, ಕನ್ನಡವೇ ಬದುಕಾಗಿ, ಬದುಕೆಲ್ಲ ಕನ್ನಡವಾಗಿರುವ ಹಿರಿಯ ಚೇತನ, ಕನ್ನಡ ಮಹರ್ಷಿ. 'ಕರ್ನಾಟಕರತ್ನ' ವಾಗಿರುವ ಕನ್ನಡ ನುಡಿ ಭಕ್ತ. ಕನ್ನಡ ಎನ್ನವುದು ನೆಲ, ಜಲ, ಭಾಷೆ, ಸಂಸ್ಕೃತಿ, ಬದುಕು ಹೀಗೆ ಸರ್ವಸ್ವವನ್ನು ಒಳಗೊಳ್ಳುವಂಥದ್ದು. ಹೀಗೆ ಸರ್ವಾಂಗೀಣವಾಗಿ ನಾಡು-ನುಡಿಯ ಬದುಕನ್ನು ಕಟ್ಟಿಕೊಂಡು, ವೀರಸೇನಾನಿಯಾಗಿ, ಸಾಸ್ಕೃತಿಕ ರಾಯಭಾರಿಯಾಗಿ ಇಪ್ಪತ್ತು ಹಾಗೂ ಇಪ್ಪತ್ತೊಂದನೆಯ ಶತಮಾನದಲ್ಲಿ ನಾಡವರನ್ನು ಮುನ್ನಡೆಸುತ್ತಿರುವ ಕನ್ನಡದ ಸ್ವಾಭಿಮಾನಿ ದೇಜಗೌ.

ದೇಜಗೌರವರು ರಾಮನಗರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ತಾಯಿಯ ತವರಾದ ಮುದಿಗೆರೆಯಲ್ಲಿ ಜುಲೈ ೦೬, ೧೯೧೮ರಲ್ಲಿ ಜನಿಸಿದರು. ತಂದೆ-ದೇವೆಗೌಡರು, ತಾಯಿ-ಚೆನ್ನಮ್ಮ. ಇವರ ಬಾಲ್ಯ ಜೀವನವನ್ನು ಚಕ್ಕರೆ ಎಂಬ ಗ್ರಾಮದಲ್ಲಿ ಕಳೆದರು. ಪ್ರಾಥಮಿಕ ಶಿಕ್ಷಣವನ್ನು ಪಡೆಯಲಾಗದ ಪರಿಸ್ಥಿತಿಯಲ್ಲಿದ್ದ ಇವರು ತಮ್ಮ ಗುರುಗಳ ಪ್ರೇರಣೆಯಿಂದ ಓದು ಮುಂದುವರೆಸಿ, ಬಿ.ಎ ಆನರ್ಸ್ ಪಡೆದು, ಎಂ.ಎ ಪದವಿಯನ್ನು ಪಡೆದು, ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ, ನಿರ್ದೇಶಕರಾಗಿ, ಕುಲಪತಿಗಳಾಗಿ ಅವರು ಮಾಡಿದ ಕೆಲಸ ನಾಡುನುಡಿ, ಸಂಸ್ಕೃತಿಗೆ ಸ್ಮರಣಿಯವಾದುದಾಗಿದೆ.

'ನನ್ನ ಬಾಳೇ ಒಂದು ಪವಾಡ. ಎನ್ನವ ದೇಜಗೌ ಬಡತನದ ಬಸಿರಿನಲ್ಲಿ ಬೆಳಕಿನತ್ತ ಸಾಗಿಬಂದವರು. ಗೊತ್ತುಗುರಿಯಿಲ್ಲದ ಪಯಣದಲ್ಲಿ ಶ್ರೀ ಗುರು ಕೃಪೆಯಿಂದ ಗುರಿಯತ್ತ ಮುನ್ನೆಡೆದವರು. 'ಡಾ॥ ಡಿ ಎಲ್ ನರಸಿಂಹಚಾರ್ಯರು' ಹೇಳುವಂತೆ **"ಅಮೇರಿಕಾ ಮಹಾಧ್ಯಕ್ಷರಲ್ಲಿ ಒಬ್ಬರಾದ ಅಬ್ರಹಾಂ ಲಿಂಕನ್ನನ ಕುರಿತು; ಅವನು ಮರದ ಗುಡಿಸಿಲಿನಿಂದ ಶ್ವೇತ ಭವನಕ್ಕೆ ಏರಿದನೆಂದು ಹೇಳುವುದುಂಟು. ದೇಜಗೌರವರಲ್ಲಿ ಲಿಂಕನ್‌ನ ನಿದರ್ಶನವನ್ನು ಕಾಣಬಹುದು"**[೧] ಎಂದಿದ್ದಾರೆ.

ಶ್ರೀ ರಾಮಕೃಷ್ಣ ಪರಮಹಂಸ ಹಾಗೂ ಸ್ವಾಮಿ ವಿವೇಕನಂದರ ಅನನ್ಯ ಗುರು-ಶಿಷ್ಯರ ಸಂಬಂಧದಂತೆ, ರಷರುಷಿ ಕುವೆಂಪು ಹಾಗೂ ನಾಡೋಜ ದೇಜಗೌರವರ ನಡುವಣ ಗುರು-ಶಿಷ್ಯರ ಸಂಬಂಧ. ಕುವೆಂಪುರವರ ಪರಮಾಪ್ತ ಶಿಷ್ಯರಾಗಿ ಶ್ರೀ ಗುರುವಿನ ಅಂತರಂಗವನ್ನು ಗೆದ್ದ ದೇಜಗೌರವರನ್ನು ಕುರಿತು ಕುವೆಂಪುರವರು **'ಶ್ರೀ ಸ್ವಾಮಿ ಸಿದ್ದೇಶ್ವರಾನಂದರು ನನ್ನ ಆಧ್ಯಾತ್ಮಿಕ ಗುರುಗಳು. ಶ್ರಿ ಜವರೇಗೌಡರು ನನ್ನ ಮಾರ್ಗದರ್ಶಕರು'**[೨] ಎಂದಿದ್ದಾರೆ.

"ಬೇಡ ಬೇಡ ಪ್ರದರ್ಶನ
ಬೇಕು ಸತ್ಯ ಸುದರ್ಶನ
ಇದುವೇ ನಿಜದ ದರ್ಶನ
ಕುವೆಂಪು ಬದುಕು ನಿದರ್ಶನ."[೩]

ಗುರು ಕುವೆಂಪುರವರ ಬದುಕನ್ನು ನೋಡಿ, ಅವರಿಂದ ಸತ್ಯದ ದರ್ಶನವನ್ನು ಪಡೆದು ಅದನ್ನು ಇತರರಿಗೂ ಹಂಚುವ ಕೆಲಸವನ್ನು ದೇಜಗೌರವರಲ್ಲಿ ಕಾಣಬಹುದಾಗಿದೆ.

'ದೇಜಗೌ' ಎಂಬ ಮೂರಕ್ಷರದಿಂದ ಮಾತ್ರದಿಂದಲೇ ಪ್ರಸಿದ್ದರಾಗಿರುವ ಕನ್ನಡ ಸಾರಸ್ವತ ಲೋಕದ ಮೇರುಪರ್ವ ದೇ. ಜವರೇಗೌಡರು ಸಾಹಿತ್ಯದಲೆಂತೋ ಹಾಗೆಯೇ ಕನ್ನಡಪರ ಹೋರಾಟದಲ್ಲೂ ಮಹಾಪರ್ವವೇ! ಹೋರಾಟಕ್ಕೆ ನಿಂತರೆ ಜಪ್ಪಯ್ಯ ಎಂದರೂ ಜಗ್ಗರು. ಒಂದು ರೀತಿಯ ಕನ್ನಡದ ಹೆಬ್ಬಂಡೆ. ಹೋರಾಟದಿಂದಲೇ ಹತ್ತು ಹಲವು ಫಲಗಳನ್ನು ಕನ್ನಡಕ್ಕೆ ದಕ್ಕಿಸಿಕೊಟ್ಟ ಕರುನಾಡಿನ ಸಿರಿಪಸಲಿವರು.

'ಹೋರಾಟದ ಬದುಕು' ಇವರ ಆತ್ಮಕಥನದ ಹೆಸರೂ ಹೌದು. ಇವರು ನಡೆದು ಬಂದ ಹಾದಿಗೆ ಅನ್ವರ್ಥವಿದು. **"ಕನ್ನಡಕ್ಕೆ ಕುತ್ತು ಬಂತೆಂದರೆ ನನ್ನಿಂದ ಸಹಿಸಲಾಗದು. ನನ್ನ ಮೈಮೇಲೆ ಉಗ್ರನರಸಿಂಹನೇ ಬಂದಂತಾಗುತ್ತದೆ. ಕನ್ನಡ ಹಗೆ - ನನಗೆ ಹಗೆ"**[೪] ಎನ್ನುವ ದೇಜಗೌ ಕನ್ನಡ ನಾಡು ನುಡಿ ವಿಚಾರದಲ್ಲಿ ಸ್ವಾಭಿಮಾನದ ಶಿಖರ. ಇಲ್ಲಿ ಯಾವ ಮುಲಾಜು ಗಿಲಾಜು, ರಾಜಿ ಗೀಜಿ, ಮರ್ಜಿ ಗಿರ್ಜಿಗಳಿಲ್ಲ. ಕನ್ನಡಕಷ್ಟೇ ಸಲಾಮು. ಬದುಕಿನಲ್ಲೂ ಅಷ್ಟೇ, ಬರಹದಲ್ಲೂ ಅಷ್ಟೆ. ಸಾದಾ ಸೀದಾ ತೆರೆದ ಪುಸ್ತಕ. ನೇರ ನಡೆ-ನುಡಿಗೆ ಮತ್ತೊಂದು ಹೆಸರೇ ದೇಜಗೌ.

ದೇಜಗೌರವರ ಮಾತು ಮಾತ್ರ ದೊಣ್ಣೆ ಆದರೆ ಹೃದಯ ಮೃದು ಬೆಣ್ಣೆ. ಗಾಂಧೀಜಿರವರ ಅಹಿಂಸಾ ಮಾರ್ಗಗಳಾದ ಹೋರಾಟ, ಉಪವಾಸ, ಸತ್ಯಗ್ರಹ ಎಂಬ ಮಂತ್ರಗಳನ್ನು ಅಳವಡಿಕೊಂಡವರು. ಇವುಗಳಿಂದಲ್ಲೇ ತಮ್ಮ ಗುರಿ ಸಾಧಿಸುವುದು ಇವರ ಹೋರಾಟದ ವೈಶಿಷ್ಟ್ಯ. ಇಂದು ಕೂಡ ಖಾದಿಧಾರಿಗಳಾಗಿ ಗಾಂಧಿತತ್ವಗಳ ತಂಪು ನೆರಳಲ್ಲಿ ಕನ್ನಡದ ಗಾಂಧಿಯೇ ಆಗಿದಾರೆ.

ಕನ್ನಡ ಭಾಷೆಯ ರಕ್ಷಣೆ ಮತ್ತು ಬೆಳವಣಿಗೆಯಲ್ಲಿ ವಹಿಸಿದ ಪಾತ್ರ ಮಹತ್ವದ್ದಾಗಿದೆ. ಕನ್ನಡ ಶಿಕ್ಷಣ ಮಾಧ್ಯಮವಾಗಬೇಕು, ಆಡಳಿತ ಮಾಧ್ಯಮವಾಗಬೇಕು, ಕನ್ನಡ ಮಾಧ್ಯಮದಲ್ಲಿ ಓದಿದವರಿಗೆ ಕೆಲಸಗಳಲ್ಲಿ ಹೆಚ್ಚಿನ ಆಧ್ಯತೆ ನೀಡಬೇಕು. ಇವುಗಳನ್ನು ಕಾರ್ಯಗತಗೊಳಿಸಿ ಕನ್ನಡ ಏಳ್ಗೆಗಾಗಿ ಶ್ರಮಿಸಿದರು. ತಮ್ಮ ಹೊಸ ಸಂಸ್ಕೃತಿಯ ಹೊಸ ಆಶಯಗಳನ್ನು ಆಯಾಮಗಳನ್ನು ರೂಪಿಸಿಕೊಳ್ಳಲು ಹಲವು ಸಂಘಸಂಸ್ಥೆಗಳನ್ನು ಕಟ್ಟಿ ಬೆಳೆಸಿದ್ದಾರೆ. ಅವುಗಳಲ್ಲಿ ಪ್ರಮುಖವಾದುಗಳೆಂದರೆ

೧. ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್,

೨. ಶ್ರೀ ಕುವೆಂಪು ವಿದ್ಯಾ ಪರಿಷತ್ತು,

೩. ದೇಜಗೌ ಟ್ರಸ್ಟ್,

೪. ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ,

೫. ಕನ್ನಡ ಅಧ್ಯಯನ ಸಂಸ್ಥೆ,

೬. ಭಾಷಾಂತರ ಪರಿಷತ್ತು,

೭. ಭಾರತಿಯ ಸ್ಥಳನಾಮ ಸಂಸ್ಥೆ,

೮. ಕುವೆಂಪು ಭಾಷಾ ಭಾರತಿ

ಹೀಗೆ ಹಲವಾರು ಸಂಘಸಂಸ್ಥೆಗಳಿಗೆ ಸ್ಫೂರ್ತಿ ನೀಡಿ ಕಟ್ಟಿ ಬೆಳೆಸಿದ ಪ್ರೊ. ದೇಜಗೌ ರವರು ಆಡಳಿತ, ಶಿಕ್ಷಣ, ಸಾಹಿತ್ಯ, ಕ್ಷೇತ್ರಗಳಿಗೆ ಅಪಾರವಾದ ಸೇವೆ ಸಲ್ಲಿಸಿದ್ದಾರೆ, ಇವರ ಅವಿರತ ಹೋರಾಟ ಉಪವಾಸದಿಂದಾಗಿ ಕನ್ನಡ ಭಾಷೆಗೆ ಅಭಿಜಾತ ಸ್ಥಾನಮಾನವನ್ನು ಸಿಕ್ಕಿರುವುದು ಹೆಮ್ಮೆಯ ವಿಷಯವಾಗಿದೆ. ಅಲ್ಲದೆ ಖ್ಯಾತವಿದ್ವಾಂಸರಾಗಿ, ಶಿಕ್ಷಣತಜ್ಞರಾಗಿ, ಅನುವಾದಕರಾಗಿ, ಜಾನಪದತಜ್ಞರಾಗಿ, ಕನ್ನಡ

ಸಾಹಿತ್ಯದಲ್ಲಿ ಸಂಶೋಧನೆ, ಕಥೆ, ಕಾದಂಬರಿ, ಚುಟುಕು, ಸಂಪಾದನೆ, ಶಿಶುಸಾಹಿತ್ಯ, ಅಂಕಣ, ವಚನ, ಪ್ರಬಂಧ, ಹೀಗೆ ಎಲ್ಲಾ ಪ್ರಕಾರದಲ್ಲೂ ಸಾಹಿತ್ಯ ಕೃಷಿ ಮಾಡಿರುವುದನ್ನು ಕಾಣಬಹುದಾಗಿದೆ. ಇಷ್ಟಾದರೂ ಇವರು **"ಗದ್ಯಸಾಹಿತ್ಯದ ಸಾರ್ವಭೌಮ"** ರೆಂದೇ ಪ್ರಸಿದ್ಧರಾಗಿದ್ದಾರೆ.

ಇವರ ಪ್ರಮುಖ ಕೃತಿಗಳೆಂದರೆ ಅಮೇರಿಕಾದಲ್ಲಿ ಗಾಂಧಿ, ಬಸವ ಬೆಳಕು, ಲೋಕದ ಬೆಳಕು, ರಾಷ್ಟ್ರಕವಿ ಕುವೆಂಪು, ವಿಚಾರವಾದಿ ಪೆರಿಯಾರ್ ಇವು ಜೀವನ ಚರಿತ್ರೆಗಳು. ಕಡುಗಲಿ ಕುಮಾರರಾಮ, ಬೆಂಗಳೂರು ಕೆಂಪೇಗೌಡ ಮತ್ತು ನಗ್ನಚಿತ್ರಗಳು ಇವು ಇವರ ಐತಿಹಾಸಿಕ ಕಾದಂಬರಿಗಳು. ಹೋರಾಟದ ಬದುಕು ಆತ್ಮಕಥೆ. ಶ್ರೀ ರಾಮಯಣ ದರ್ಶನಂ ವಚನ ಚಂದ್ರೀಕೆ, ಅಲ್ಲದೆ Village Name of Mysore District, A Study of Karnataka Culture and Folklore, ಇವರ ಪ್ರಮುಖ ಇಂಗ್ಲೀಷ್ ಕೃತಿಗಳು.

ದೇಜಗೌರವರಿಗೆ ಪದ್ಮಶ್ರೀ, ಕರ್ನಾಟಕ ರತ್ನ(೨೦೦೮), ನೃಪತುಂಗ ಪ್ರಶಸ್ತಿ, ಪಂಪ ಪ್ರಶಸ್ತಿ, ಬಸವಶ್ರೀ ಪ್ರಶಸ್ತಿ, ಅಲ್ಲಮಶ್ರೀ ಪ್ರಶಸ್ತಿ, ನಾಡೋಜ ಪುರಸ್ಕಾರ, ಹೀಗೆ ಹಲವು ಪ್ರಶಸ್ತಿಗಳನ್ನು ಪಡೆದಿದ್ದಾರೆ. ೪೭ ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದಾರೆ. ಅಲ್ಲದೆ ಹಲವು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೆಟ್ ಪದವಿಯನ್ನು ಮತ್ತು ಹತ್ತು ಅಭಿನಂದನಾ ಗ್ರಂಥಗಳಿಂದ ಅಭಿನಂದಿತರಾಗಿದ್ದಾರೆ.

ಪ್ರೊ.ದೇಜಗೌ ರವರು ಅಧುನಿಕ ಕನ್ನಡ ಸಾಹಿತ್ಯದ ಪ್ರಮುಖ ವಿಧ್ವಾಂಸರಲ್ಲಿ ಒಬ್ಬರಾಗಿದ್ದಾರೆ. ನಾಗರೀಕತೆಯ ಸೋಂಕಿಲ್ಲದ ಚಕ್ಕರೆ ಎಂಬ ಕುಗ್ರಾಮದಲ್ಲಿ ಅನಕ್ಷರಸ್ಥ ಬಡ ಕುಟುಂಬದಲ್ಲಿ ಹುಟ್ಟಿ ಇಂದು ಕನ್ನಡದ ಮಹಾ ಶಕ್ತಿಯಾಗಿ ರೂಪುಗೊಂಡಿದ್ದು. ಅವರು ವಿವಿಧ ಕ್ಷೇತ್ರದಲ್ಲಿ ಸರ್ವೋತೋಮುಖ ಅಭಿವೃದ್ದಿಗಾಗಿ ಶ್ರಮಿಸಿದ ಕರ್ನಾಟಕದ ರತ್ನರಲ್ಲಿ ಒಬ್ಬರಾಗಿದ್ದಾರೆ. ಪ್ರೊ.ದೇಜಗೌರವರ ಸಾಹಿತ್ಯ ವಿಚಾರ ವ್ಯಾಪ್ತಿ ಸಾಗರಮಯವಾದದ್ದು, ದಿಗಂತವ್ಯಾಪ್ತಿಯುಳ್ಳದ್ದು, ವಿಶ್ವಕವಿ ಕುವೆಂಪುರವರ ವಿಶ್ವಮಾನವತತ್ವವನ್ನು, ವಿಶ್ವದ ಶ್ರೇಷ್ಠ ದಾರ್ಶನಿಕ ಚಿಂತನೆಗಳನ್ನು ಮೈಗೂಡಿಸಿಕೊಂಡವರು. ಹಲವಾರು ದೇಶಗಳಿಗೆ ಹೋಗಿ ಬಂದು ಒಂದು ಹೊಸ ಜಗತ್ತನ್ನು ಜನರಿಗೆ ಪರಿಚಯ ಮಾಡಿಕೊಟ್ಟವರು. ಅವರ ಅನುಭವ ವಿಸ್ತಾರ

ವೈವಿಧ್ಯಮಯವಾದದ್ದು, ವರ್ಣರಂಜಕವಾದದ್ದು. ಅದು ಗುಡಿಸಲಿನಲ್ಲಿ ಬೇರು ಬಿಟ್ಟು ಗಂಗೋತ್ರಿವರೆಗೆ ಹಬ್ಬಿ ಅಮೇರಿಕಾದಲ್ಲಿ ಮಾತ್ರ ನಿಲ್ಲದೆ ಇಡೀ ವಿಶ್ವವನ್ನೆ ತುಂಬಿಕೊಂಡಿದೆ.

ಇವರು ಪ್ರವಾಸವನ್ನು ಕುರಿತು "ಜ್ಞಾನಾಭಿವೃದ್ದಿಯ ದೃಷ್ಟಿಯಿಂದ ಅನುಭವ ಸಂಪಾಧನೆಯ ಕೋನದಿಂದ ರಾಷ್ಟ್ರ ಪ್ರಗತಿಯ ನಿಮಿತ್ತದಿಂದ ಪ್ರವಾಸ ಅತ್ಯಗತ್ಯ ನಮ್ಮ ಜನ ಪ್ರಪಂಚದ ಮುಂದುವರೆದ ರಾಷ್ಟ್ರಗಳಿಗೆ ಮೇಲಿಂದ ಮೇಲೆ ಹೋಗಬೇಕು ಅಲ್ಲಿನ ವಿದ್ಯಮಾನಗಳನ್ನು ಗ್ರಹಿಸಬೇಕು, ಅಭಿವೃದ್ದಿ ಕಾರ್ಯಗಳನ್ನು ಗ್ರಹಿಸಬೇಕು, ಅಲ್ಲಿನ ಪ್ರತಿಭಾವಂತ ತಜ್ಞರೊಡನೆ ವಿಚಾರವಿನಿಮಯ ಮಾಡಬೇಕು, ಸ್ವದೇಶಕ್ಕೆ ಅನುಕೂಲವಾದದ್ದನ್ನ ಕಾರ್ಯರೂಪಕ್ಕೆ ತರಬೇಕು. ಎಂದು ಪ್ರವಾಸಿಗರ ಕರ್ತವ್ಯವನ್ನು ತಿಳಿಸುತ್ತಾರೆ. ಅಲ್ಲದೆ "ನಮ್ಮ ಸಂಸ್ಕೃತಿಗೆ ಬಾಧಕವಾಗದಂತೆ, ಪ್ರಗತಿಯ ದೃಷ್ಟಿಯಿಂದ ಅನ್ಯ ಸಂಸ್ಕೃತಿಯ ಶ್ರೇಷ್ಠ ಗುಣಗಳನ್ನು ಅಳವಡಿಸಿಕೊಳ್ಳಬೇಕೆಂಬುದು"೫ ದೇಜಗೌ ರವರ ನಿಲುವಾಗಿದೆ.

ಇವರು ನಮ್ಮ ಕನ್ನಡ ನಾಡಿನ ಮಣ್ಣಿನ ವಾಸನೆಯನ್ನು ನಿಜವಾದ ಅರ್ಥದಲ್ಲಿ ಮೈಗೂಡಿಸಿಕೊಂಡ ಅಪೂರ್ವರಲ್ಲಿ ಅಪೂರ್ವರಾಗಿದ್ದಾರೆ.

ದೇಜಗೌ ರವರು ಅಗಣಿತ ಸ್ಥಾನಮಾನಗಳನ್ನು ಗಳಿಸಿಕೊಂಡಿರುವ ಅನುಭವಗಳ ಜೊತೆಗೆ ಕುಲಪತಿಯಾಗಿದ್ದ ಮತ್ತು ವಿಶ್ರಾಂತ ಜೀವನದಲ್ಲಿ ಅಮೇರಿಕಾ, ಆಫ್ರಿಕಾ, ರಷ್ಯಾ, ನೈಜೀರಿಯಾ, ಆಸ್ಟ್ರೀಯಾ, ಜಪಾನ, ಇಟಲಿ, ಇಸ್ರೇಲ್, ಐರ್ಲೆಂಡ್, ಕಿನ್ಯಾ, ಶ್ರೀಲಂಕಾ, ಸಿಂಗಾಪುರ, ಇಂಗ್ಲೇಂಡ್, ಇವೇ ಮೊದಲಾದ ದೇಶಗಳಲ್ಲಿ ಸುತ್ತಿ ಅಲ್ಲಿನ ಜನಜೀವನ ಸಂಸ್ಕೃತಿ, ಶಿಕ್ಷಣದ ಭೌಗೋಳಿಕ ವೈವಿಧ್ಯತೆಗಳನ್ನು ತಮ್ಮದಾಗಿಸಿಕೊಂಡಿರುವ ಅನುಭವ ಅವರ ಉತ್ತಮ ವಿಚಾರ ಶಕ್ತಿಗೆ ಪೂರಕವಾಗಿ ಪುಷ್ಟಿ ತಂದಿದೆ.

ಜಗತ್ತಿನ ನಾನಾ ದೇಶಗಳಲ್ಲಿ ಸಂಚರಿಸಿ ಶ್ರೀಯುತ ಪ್ರೊ.ದೇಜಗೌರವರು ಕನ್ನಡಕ್ಕೆ ಗಟ್ಟಿಯಾದ ಪ್ರವಾಸ ಕಥನಗಳನ್ನು ಕೊಟ್ಟಿದ್ದಾರೆ. ಅವು ಈ ಕೆಳಗಿನಂತಿವೆ.

**೧. ವಿದೇಶಗಳಲ್ಲಿ ನಾಲ್ಕುವಾರ,**

**೨. ವಿಸ್ಮಯಗಳ ನಾಡಿನಲ್ಲಿ,**

೩. **ಆಫ್ರಿಕಾ ಯಾತ್ರೆ**

೪. **ಏಸುವಿಭೀಷಣರ ನಾಡಿನಲ್ಲಿ,**

೫. **ಗೋವೆಯಿಂದ ಶರ್ಡಿ ಅಜಂತಾಗಳವರೆಗೆ,**

೬. **ಪ್ರವಾಸಿಯ ದಿನಚರಿ,**

೭. **ಹಳದಿ ಕಲ್ಲಿನ ಉಧ್ಯಾನ,**

೮. **ನಿಚ್ಚಹಸುರಿನ ನಾಡಿನಲ್ಲಿ,**

೯. **ಜಗತ್ತಿನ ನಡು ನೆತ್ತಿಯ ಮೇಲೆ,**

ಈಗೆ ಒಂಬ್ಬತ್ತು ಪ್ರವಾಸ ಕಥನಗಳನ್ನು ರಚಿಸಿದ್ದಾರೆ. ಇವರ ಪ್ರವಾಸ ಕಥನವನ್ನು ಒಟ್ಟಾಗಿ ಎರಡು ರೀತಿಯಲ್ಲಿ ಪ್ರಕಟಿಸಿದ್ದಾರೆ.

೧. **ಪ್ರವಾಸಿ ಕಥನ**

೨. **ಪ್ರವಾಸಿ ಸಂಭ್ರಮ**

ಇವುಗಳಲ್ಲಿ ಆಪ್ರಿಕಾ ಯಾತ್ರೆ, ಏಸುವಿಭೀಷಣರ ನಾಡಿನಲ್ಲಿ, ಪ್ರವಾಸಿಯ ದಿನಚರಿ, ಹಳದಿ ಕಲ್ಲಿನ ಉಧ್ಯಾನ, ನಿಚ್ಚಹಸುರಿನ ನಾಡಿನಲ್ಲಿ, ಜಗತ್ತಿನ ನಡು ನೆತ್ತಿಯ ಮೇಲೆ, ಕೃತಿಗಳನ್ನು ಪ್ರತ್ಯೇಕವಾಗಿ ಪ್ರಕಟಿಸಿದ್ದಾರೆ. ಅಲ್ಲದೆ **"ಪ್ರವಾಸಿ ಕಥನ"** ಎಂಬ ಶೀರ್ಷಿಕೆಯಲ್ಲಿ ಒಟ್ಟಾಗಿಯೂ ಪ್ರಕಟಿಸಿದ್ದಾರೆ. ವಿದೇಶಗಳಲ್ಲಿ ನಾಲ್ಕುವಾರ, ವಿಸ್ಮಯಗಳ ನಾಡಿನಲ್ಲಿ, ಗೋವೆಯಿಂದ ಶರ್ಡಿ ಅಜಂತಾಗಳವರೆಗೆ, ಕೃತಿಗಳನ್ನು ಪ್ರತ್ಯೇಕವಾಗಿ ಪ್ರಕಟಿಸಿದ್ದಾರೆ. ಅಲ್ಲದೆ **"ಪ್ರವಾಸಿ ಸಂಭ್ರಮ"** ಎಂಬ ಶೀರ್ಷಿಕೆಯಲ್ಲಿ ಒಟ್ಟಾಗಿಯೂ ಪ್ರಕಟಿಸಿದ್ದಾರೆ.

ಸಾಹಿತ್ಯಿಕ, ಸಾಂಸ್ಕೃತಿಕ, ಸಾಮಾಜಿಕ ಮಹತ್ವದ ಸಂಗತಿಗಳತ್ತ, ಅಧ್ಯಯನ-ಅನುಭವಗಳ ಗಟ್ಟಿ ಈ ಪ್ರವಾಸ ಕಥನಗಳಲ್ಲಿದೆ. ನಮ್ಮ ನಾಡಿನ ಹಿತದೃಷ್ಟಿಯಿಂದ ಗಮನಾರ್ಹವಾದ ಸಂಗತಿಗಳತ್ತ, ಒತ್ತುಕೊಟ್ಟೆ ಅವರು ವಿವಿಧ ದೇಶಗಳ ಹಿರಿಮೆ-ಗರಿಮೆ-ಸಾಧನೆ-ವೈಶಿಷ್ಟ್ಯಗಳನ್ನು ಗುರ್ತಿಸಿದ್ದಾರೆ. ಅವು ಕೇವಲ ವರದಿಗಳಾಗದೆ **ಪ್ರವಾಸಿ-ಮಾಹಿತಿ-ಸಂಶೋಧನೆಗಳ** ಸಂಕಲನವಾಗಿ ಮೂಡಿ ಬಂದಿದೆ.

ಪ್ರೊ.ದೇಜಗೌ ಪ್ರವಾಸ ಸಾಹಿತ್ಯಗಳನ್ನು ಎರಡು ಭಾಗವಾಗಿ ವಿಂಗಡಿಸಿ ವಿಶ್ಲೇಸಿಸಬಹುದಾಗಿದೆ

1. ಸಮೂಹ ಪ್ರವಾಸ,

2. ಏಕಾಕಿ ಪ್ರವಾಸ.

ಸಮೂಹ ಪ್ರವಾಸದಲ್ಲಿ ಇವರು ಸರ್ಕಾರದ ಪ್ರತಿನಿಧಿಯಾಗಿ ವಿಶ್ವವಿದ್ಯಾನಿಲಯದ ಪ್ರತಿನಿಧಿಯಾಗಿ ಬೇರೆ ಬೇರೆ ದೇಶಗಳಿಗೆ ನಿಶ್ಚಿತ ಸಮಯದಲ್ಲಿ ಹೋಗಿ ಬರುವುದಾಗಿದೆ. ಏಕಾಕಿ ಪ್ರವಾಸದಲ್ಲಿ ಇದ್ಯಾವುದೇ ನಿರ್ಬಂಧಗಳಿರುವುದಿಲ್ಲ.

ದೇಜಗೌರವರು ವಿದೇಶಗಳಿಗೆ ಹೋದರು ಅದಕ್ಕೆ ಅಂಟಿಕೊಂಡವರಲ್ಲ. ಅಲ್ಲಿಯ ಉತ್ತಮ ಅಂಶಗಳನ್ನು ನಮ್ಮ ದೇಶಗಳಲ್ಲಿ ಅಳವಡಿಕೊಂಡು ದೇಶ ಮುಂನ್ನಡೆಸಬೇಕೆಂದು ಬಯಸುವವರು ಅವರೇ ಹೇಳುವ ಹಾಗೆ "ನಾನು ಸ್ವಭಾವತ: ಸ್ವಾವರನಮೀಹಿ ಅನ್ಯವಾತಾವರಣದಲ್ಲಿ ನೀರುಳಿದ ಮೀನಂತಾಗುತ್ತೇನೆ. ಕಮಲ–ದಂತಾಗುತ್ತೇನೆ. ನನ್ನ ತಾಯ್ನೆಲದಲ್ಲಿ ನಾನು ಪ್ರಸನ್ನನಾಗಿರುವಂತೆ ಬೇರೆ ನೆಲದಲ್ಲಿ ಪ್ರಸನ್ನನಾಗಿರಲಾರೆ. ಅನ್ಯ ಸಮಾಜ ಎಷ್ಟೇ ಮುಂದುವರಿದಿರಲಿ, ಅದು ಭಾರತೀಯ ಸಮಾಜಕ್ಕೆ ಎಣೆಯಾಗಲಾರದೆಂಬುದೇ ನನ್ನ ನಂಬಿಕೆ."೬ ನನ್ನ ಜನ ಬಡತನ–ದಲ್ಲಿರುವಾಗ ಬೇರೆ ಜನರ ನಡುವೆ ನಾನು ಲೋಲುಪನಾಗಲಾರೆ. ಇಲ್ಲಿ ಸಾಕಷ್ಟು ಕೆಲಸವಿರುವಾಗ ಬೇರೆಲ್ಲಿಯೂ ಕಾಲಹರಣ ಮಾಡುತ್ತ ಕೂಡಲಾರೆ. ಎಂಬ ಮಾತುಗಳಲ್ಲಿ ಅವರ ನಾಡು–ನುಡಿ, ನೆಲ–ಜಲ, ದೇಶಾಭೀಮಾನವನ್ನು ಕಾಣಬಹುದಾಗಿದೆ.

ದೇಜಗೌ ತಮ್ಮ ಎಲ್ಲ ಪ್ರವಾಸ ಕಥನಗಳಲ್ಲೂ ಹಲವು ವೈವಿಧ್ಯಮಯ ಅಂಶಗಳನ್ನು ಗುರುತಿಸುತ್ತಾರೆ. ಮುಖ್ಯವಾಗಿ ಅಲ್ಲಿನ ಸಾಂಸ್ಕೃತಿಕ ಅಂಶಗಳು, ಧಾರ್ಮಿಕ ಅಂಶಗಳು, ರಾಜಕಾರಣದ ಅಂಶಗಳು, ಸಾಮಾಜಿಕ ಅಂಶಗಳು, ಮೌಖಿಕ ಅಂಶಗಳು, ಚಾರಿತ್ರೆಯ ಅಂಶಗಳು ಹೀಗೆ ಹತ್ತು ಹಲವು ಅಂಶಗಳನ್ನು, ಅಲ್ಲಿ ನೋಡಿದ, ಕೇಳಿದ ಅಂಶಗಳನ್ನು ನಿಖರವಾದ ದಾಖಲೆಗಳ ಮುಂಖಾಂತರವೇ ನಮಗೆ ಒದಗಿಸುತ್ತಾರೆ.

ದೇಜಗೌರವರ ಪ್ರವಾಸ ಕಥನವನ್ನು ಬರೆಯುವಾಗ ಮೂರು ತಂತ್ರಗಳನ್ನು ಬಳಸುತ್ತಾರೆ. ಅವುಗಳೆಂದರೆ

೧. ಪತ್ರಲೇಖನ

೨. ಡೈರಿ(ದಿನಚರಿ)

೩. ಕಾದಂಬರಿ ಕಥನತಂತ್ರ

ದೇಜಗೌರವರು ಪ್ರವಾಸವನ್ನು ಶೈಕ್ಷಣಿಕವಾಗಿ ಸ್ವೀಕರಿಸುತ್ತಾರೆ. ತಾವು ಹೋದೆಡೆಲ್ಲೆಲ್ಲಾ ವಿಶ್ವವಿದ್ಯಾನಿಲಯಗಳನ್ನು ಸಂದರ್ಶಿಸುವುದು, ಅಲ್ಲಿನ ವಿದಾಂಸರೊಡನೆ ಸಂಭಾಷಿಸುವುದು, ಹಲವು ವಿಚಾರಗಳ ಬಗ್ಗೆ ಚರ್ಚಿಸಿ ತಮ್ಮ ಪ್ರವಾಸ ಕಥನಗಳಲ್ಲಿ ದಾಖಲಿಸಿರುವುದನ್ನು ಗುರುತಿಸಬಹುದು. ಅಲ್ಲದೆ ಇವರ ಪ್ರವಾಸಕಥನವನ್ನು ಓದುವಾಗ ನಮಗೆ ಗೋಚರಿಸುವ ಬಹುಮುಖ್ಯ ಅಂಶವೆಂದರೆ ಭಾರತ ಮತ್ತು ವಿದೇಶಗಳ ತುಲನಾತ್ಮಕ ಅದ್ಯಯನ, ಅಂದರೆ ಧಾರ್ಮಿಕ ಪದ್ಧತಿ, ಸಾಮಾಜಿಕ ಪದ್ಧತಿ, ಆರ್ಥಿಕ ಸ್ವಾವಲಂಬನೆ, ನಮ್ಮ ಬೋಳೆತನ, ಕೆಲಸಗಳ್ಳತನ, ಇವೆಲ್ಲವನ್ನು ಬಹಳ ತುಲನಾತ್ಮಕವಾಗಿ ವಿವೇಚಿಸಿದ್ದಾರೆ. ನಾವೆಷ್ಟು ಬೇರೆ ದೇಶಗಳಿಗಿಂತ ಹಿಂದೆದ್ದೇವೆ ಎಂಬುದನ್ನು ಬಹಳ ಮಾರ್ಮಿಕವಾಗಿ ತಮ್ಮ ಪ್ರವಾಸ ಕಥನಗಳಲ್ಲಿ ತೋರಿಸಿದ್ದಾರೆ. ವಿದೇಶದಲ್ಲಿ ಎಷ್ಟೇ ಸಂಮೃದ್ದಿಯಾಗಿದ್ದರು, ವೈಜ್ಞಾನಿಕವಾಗಿ ಮುಂದಿದ್ದರು ನಮ್ಮ ದೇಶದ ಜಲಸಂಪತ್ತು, ಸಸ್ಯಸಂಪತ್ತು, ಭೂವೈವಿದ್ಯಯಿಂದ ಶ್ರೀಮಂತವಾಗಿರುವುದನ್ನು ಕಂಡು ಸಂತೋಷ ಪಡುವ ಇವರು ನಮ್ಮ ದೇಶವನ್ನು ಬೆಂಬಿಡದೇ ಕಾಡುತ್ತಿರುವ ಬಡತನವನ್ನು ನೋಡಿ ವ್ಯಥೆ ಪಡುವುದು ಇವರಲ್ಲಿನ ರಾಷ್ಟ್ರೀಯತೆ ಕಾಳಜಿಯನ್ನು ತಿಳಿಸುತ್ತದೆ. ದೇಜಗೌರವರು ತಮ್ಮ ಪ್ರವಾಸ ಸಾಹಿತ್ಯದ ಅನುಭವಸಾರವನ್ನು ಸಹೃದಯರಿಗೆ ತಲುಪಿಸುವ ಸರ್ವಪ್ರಯತ್ನಗಳನ್ನು ಮಾಡಿರುವುದು ಇವರ ನಿರಂತರ ಶ್ರಮದ ಪ್ರತಿಫಲದಂತಿವೆ.

ಇವರ **'ವಿದೇಶಗಳಲ್ಲಿ ನಾಲ್ಕುವಾರ'** ರಷ್ಯಾ, ಆಸ್ಟ್ರೀಯಾ, ಜರ್ಮನಿ, ಇಂಗ್ಲೇಂಡ್, ಪ್ರವಾಸದ ಅನುಭವವಾಗಿದ್ದು, ಕೇವಲ ನಾಲ್ಕು ವಾರದಲ್ಲಿ ಅಂದರೆ ದಿನಾಂಕ ೧೬.೧೧.೧೯೭೦ ರಿಂದ ೧೬.೧೦.೧೯೭೦ ರವರೆಗೆ ಪ್ರವಾಸ ಮಾಡಿದಾಗ ಅಯಾಯ ದೇಶಗಳಲ್ಲಿ ನೋಡಿದ ಅನುಭವಿಸಿದ ಅಪೂರ್ವ ಮಾಹಿತಿಗಳ ಸಂಗ್ರಹವೇ ಈ ಗ್ರಂಥದ ತಿರುಳು. ಅಲ್ಲಿನ ಜನರ ಶಿಸ್ತನ್ನು, ದೇಶಾಭಿಮಾನವನ್ನು,

ಪ್ರಮಾಣಿಕತೆಯನ್ನು ಕಂಡು ಸಂತ್ತೋಷ ಪಡುತ್ತಾರೆ. ಇವೆಲ್ಲಾ ನಮ್ಮ ಜನರಲ್ಲಿ ಇಲ್ಲವಲ್ಲಾ ಎಂದು ಮರುಗುವುದನ್ನು ಅವರ ಕಥನಗಳಲ್ಲಿ ನೋಡಬಹುದಾಗಿದೆ.

**'ಆಫ್ರಿಕಾಯಾತ್ರೆ'** ಕನ್ನಡದಲ್ಲಿ ಆಫ್ರಿಕಾ ಕುರಿತಂತೆ ಪ್ರಕಟವಾಗಿರುವ ಮೊತ್ತಮೊದಲ ಮಹತ್ವದ ಕೃತಿ ಇದಾಗಿದ್ದು. ಹದಿನೆಂಟು ದಿನಗಳ ಪ್ರವಾಸದಲ್ಲಿ ನೈಜಿರಿಯಾ, ಘಾನಾ ಮತ್ತು ಕಿನ್ಯಾ ದೇಶಗಳ ಇತಿಹಾಸ, ಸಂಸ್ಕೃತಿ, ಜನಜೀವನ, ಧಾರ್ಮಿಕ, ಶೈಕ್ಷಣಿಕ, ಹಾಗೂ ಹಳ್ಳಿಗಾಡಿನ ಸ್ಥಿತಿಗತಿಗಳ ಬಗ್ಗೆ ಈ ಕೃತಿಗಳಲ್ಲಿ ನಿರೂಪಿಸಿದ್ದಾರೆ.

**'ಏಸುವಿಭೀಷಣರನಾಡಿನಲ್ಲಿ'** ಇಸ್ರೀಲ್, ಐರ್ಲೆಂಡ್ ಮತ್ತು ಶ್ರೀಲಂಕಾಗಳ ಪ್ರವಾಸ ಕಥನಗಳು. ಇದು ದಿನಚರಿ ರೂಪದಲ್ಲಿವೆ. ಈ ಕೃತಿಯನ್ನು ಮೂರು ಭಾಗಗಳಾಗಿ ಮಾಡಲಾಗಿದ್ದು,

೧. ಯೇಸುವಿನನಾಡಿನಲ್ಲಿ – ಇಸ್ರೇಲ್ ಬಗ್ಗೆ,

೨. ಮಂಗಳಿರುವನಾಡಿನಲ್ಲಿ – ಐರ್ಲೆಂಡ್ ಬಗ್ಗೆ ಮತ್ತು

3. ವಿಭೀಷಣನನಾಡಿನಲ್ಲಿ – ಶ್ರೀಲಂಕ ಬಗ್ಗೆಯೂ ವಿವರಗಳಿರುವ ಚಿಂತನಾಯ ಕೃತಿಯಾಗಿದೆ.

**'ಜಗತ್ತಿನ ನಡು ನೆತ್ತಿಯ ಮೇಲೆ'** ಇದು ದೇಜಗೌರವರು ಕೈಗೊಂಡ ಅಲಾಸ್ಕವನ್ನು ಕುರಿತ ಪ್ರವಾಸ ಕಥನ. ಉತ್ತರ ಧ್ರುವದ ಮಹಾನ್ ರಾಜ್ಯ, ಹಿಮದಮನೆ, ಅಲಾಸ್ಕದ ಬುಡಕಟ್ಟು ಜನಾಂಗದವರ ಸಾಂಸ್ಕೃತಿಕ ಅಧ್ಯಯನವಾಗಿದೆ. ಇಲ್ಲಿನ ವೈಚಿತ್ರ್ಯ, ವೈಶಿಷ್ಯಗಳನ್ನು ಒಳಗಣ್ಣಿನಿಂದ ನೋಡಿರುವ ಕೃತಿಯಾಗಿದ್ದು, ಇದು ಪ್ರವಾಸ ಕಥನ ಮಾತ್ರವಲ್ಲದೆ ಜಾನಪದ ಗ್ರಂಥವಾಗಿ ಮಹತ್ವ ಪಡೆದುಕೊಂಡಿದೆ.

**'ಪ್ರವಾಸಿಯ ದಿನಚರಿ'** ಈ ಕೃತಿಯನ್ನು ದಿನದ ವಿವರದೊಡನೆ ಬರೆದಿರುವುದನ್ನು ಪುಸ್ತಕದ ಶಿರ್ಷಿಕೆಯೇ ತಿಳಿಸುತ್ತದೆ. ದೇಜಗೌರವರು ಇಂಗ್ಲೆಂಡನಲ್ಲಿ ನಡೆದ ವಿಶ್ವವಿದ್ಯಾನಿಲಯಗಳ ಸಮ್ಮೇಳನದಲ್ಲಿ ಭಾಗವಹಿಸಿದ ಬಗ್ಗೆ ನಂತರ ರೋಮ್ ನಗರಕ್ಕೆ ಭೇಟಿ ನೀಡಿದ ಬಗ್ಗೆ ಅನುಭವವನ್ನು ಅಂಚಿಕೊಂಡಿದ್ದಾರೆ.

**'ನಿಚ್ಚಹಸುರಿನ ನಾಡಿನಲ್ಲಿ'** ಸ್ವಿಜರ್‌ಲ್ಯಾಂಡಿನಲ್ಲಿ ಕಂಡು ನೋಡಿದ ಅನುಭವದಿಂದ ಮೂಡಿದ ಕೃತಿಯಾಗಿದೆ. ಇವರ **'ವಿಸ್ಮಯಗಳ ನಾಡಿನಲ್ಲಿ'** ಮತ್ತು **'ಹಳದಿ ಕಲ್ಲಿನ ಉದ್ಯಾನ'** ಪ್ರವಾಸ ಕಥನವು ಅವರು ಕೈಗೊಂಡ ಅಮೆರಿಕಾ ಪ್ರವಾಸ ಕೃತಿಯಾಗಿದೆ. ಈ ಕೃತಿಗಳು ನಿಬಂಧನೆಯ ಪ್ರಮುಖ ಭಾಗವಾಗಿರುವುದರಿಂದ ಸವಿಸ್ತಾರವಾಗಿ ಚರ್ಚಿಸಲಾಗಿದೆ.

## ಕೊನೆಟಿಪ್ಪಣಿಗಳು

೧. ಬನ್ನೂರು ಕೆ. ರಾಜು ರವರು 'ಮೈಸೂರು ಮಿತ್ರ' ಪತ್ರಿಕೆಯ ಸಾಪ್ತಾಹಿಕ ಪುರವಣಿ ಅಂಕಣ

೨. ಅದೇ

೩. ಡಾ// ಎಂ.ಜಿ.ಆರ್ ಅರಸ್ ರವರ ಚುಟುಕು, ಮಂದಾರ, ಪುಟ-೭೫

೪. ಬನ್ನೂರು ಕೆ. ರಾಜು ರವರು 'ಮೈಸೂರು ಮಿತ್ರ' ಪತ್ರಿಕೆಯ ಸಾಪ್ತಾಹಿಕ ಪುರವಣಿ ಅಂಕಣ

೫. ದೇಜಗೌರವರ ವಿದೇಶದಲ್ಲಿ ನಾಲ್ಕುವಾರ ಕೃತಿಯ ಮುನ್ನುಡಿಯಿಂದ ಎಂ ವಿಜಯಲಕ್ಷ್ಮೀರವರ - ದೇಜಗೌ ಜೀವನ ಮತ್ತು ಸಾಧನೆ ಪುಟ- ೩೨೬

೬. ಎಂ ವಿಜಯಲಕ್ಷ್ಮೀರವರ - ದೇಜಗೌ ಜೀವನ ಮತ್ತು ಸಾಧನೆ ಪುಟ- ೩೨೬

# ಅ. ವಿಸ್ಮಯಗಳ ನಾಡಿನಲ್ಲಿ

ಪ್ರೊ. ದೇಜಗೌರವರ ಪ್ರವಾಸ ಕಥನಗಳಲ್ಲಿ ಅತ್ಯಂತ ಮಹತ್ವವಾದ, ವಿಶಿಷ್ಟವಾದ ಮತ್ತು ಸೃಜನಾತ್ಮಕವಾದ ಕಥನವೆಂದರೆ 'ವಿಸ್ಮಯಗಳ ನಾಡಿನಲ್ಲಿ' ಈ ಕಥನವು ಅವರ ವಿಶ್ರಾಂತ ಜೀವನದಲ್ಲಿ ಕೈಗೊಂಡ ಅಮೆರಿಕಾ ಪ್ರವಾಸ ಕೃತಿಯಾಗಿದೆ. ಇದರಲ್ಲಿ ದೇಜಗೌರವರ ನಿರೂಪಣ ತಂತ್ರ ಹೊಚ್ಚಹೊಸದಾಗಿದ್ದು ಕಾದಂಬರಿ ತಂತ್ರದಲ್ಲಿ ರಚನೆಯಾಗಿದೆ. ಇದರಲ್ಲಿರುವ ಕಾದಂಬರಿ ತಂತ್ರ ನಿರೂಪಣೆಗಾಗಿಯೇ ಹೊರತು ಪಾತ್ರರಚನೆಗಾಗಿ ಅಲ್ಲ. ಅಲ್ಲದೆ ಈ ಕಥನದಲ್ಲಿ ಅಮೆರಿಕಾ ಮತ್ತು ಭಾರತದ ನಡುವಿನ ತೌಲನಿಕ ಅಧ್ಯಾಯನವನ್ನು, ಅಮೇರಿಕಾದ ಸರ್ವಮುಖಗಳ ಪ್ರತಿಬಿಂಬವನ್ನು ಇಲ್ಲಿ ತಿಳಿಸುತ್ತಾರೆ.

ಅಮೇರಿಕಾ ಅವಕಾಶಗಳ ಗಣಿ ಅಲ್ಲಿಗೆ ಅನೇಕರು ಹೋಗಿ ಬಂದು ಅಲ್ಲಿ ಆನಂದಿಸಿದ ಅನುಭವವನ್ನು ಗ್ರಂಥರೂಪದಲ್ಲಿ ಸಾಕಾರಗೊಳಿಸಿದ್ದಾರೆ. ಎ.ಎನ್ ಮೂರ್ತಿರಾವ್, ಗೊರೂರು ರಾಮಸ್ವಾಮಿ ಅಯ್ಯಾಂಗಾರ್, ನಾಗೇಗೌಡ, ಕಾರಂತ, ರಾಮಚಂದ್ರ ಹೀಗೆ ಹಲವರು ಅಮೇರಿಕಾದ ಬಗ್ಗೆ ರಚಿಸಿದ ಅನೇಕ ಕೃತಿಗಳಿರುವಾಗ ಮತ್ತೊಂದು ಕೃತಿ ರಚನೆ ಅವಶ್ಯಕತೆ ಇತ್ತ? ಎಂದು ಪ್ರಶ್ನೆ ಕೇಳುವವರಿಗೆ ಉತ್ತರವಾಗಿ ದೇಜಗೌರವರು ಕೃತಿ ರಚನೆ ಮಾಡಿದ್ದಾರೆ. ಪ್ರದೇಶದಿಂದ ಪ್ರದೇಶಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನತೆ ಇರುವಂತೆ, ಅಭಿಪ್ರಾಯಕ್ಕೂ, ಭಿನ್ನತೆಗಳಿವೆ. ಅವರವರ ದೃಷ್ಟಿಕೋನಕ್ಕೆ ಅನುಗುಣವಾಗಿ ಕೃತಿ ರಚನೆಯಾಗುತ್ತದೆ ಎಂದು ತಿಳಿಸುವ ಇವರು ಅಮೇರಿಕಾ ಕುರಿತು ಮೊದಲು ಬಂದ ಕೃತಿಗಳಿಗಿಂತ ವಿಭಿನ್ನವಾಗಿ ರಚಿಸಿರುವುದನ್ನು ಕಾಣಬಹುದಾಗಿದೆ.

ದೇಜಗೌ ರವರು ತಮ್ಮ ವಿಸ್ಮಯಗಳ ನಾಡಿನಲ್ಲಿ ಪ್ರವಾಸ ಕಥನದ ನಿರೂಪಣೆಗಾಗಿ ಕಾದಂಬರಿ ತಂತ್ರವನ್ನು ಆಳವಡಿಸಿಕೊಂಡಿದ್ದಾರೆ. ಅವರೇ ಹೇಳುವಂತೆ

"ಕಥನ ನಿರೂಪಣೆಗಾಗಿ ಕಾದಂಬರಿ ತಂತ್ರವನ್ನು ಬಳಸಿಕೊಳ್ಳಲಾಗಿದೆ. ವಸ್ತುಸ್ಥಿತಿಯ ನೈಜ ಚಿತ್ರಣಕ್ಕೆ ಉತ್ತಮ ಪುರುಷಕ್ಕಿಂತ ಪ್ರಥಮ ಪುರುಷದ ಬಳಕೆಯೇ ಮೇಲೆಂದು ಕಥನಕಾರ ಸಾಕ್ಷಿಭೂತವಾಗುಳಿಯುವುದೆ ಸರಿಯೆಂದು ನನಗನ್ನಿಸಿದ್ದರಿಂದ ಇಡೀ ಕಥನವನ್ನು ಪ್ರಥಮ ಪುರುಷದಲ್ಲಿ ಬಳಸಲಾಗಿದೆ. ಪ್ರಥಮ ಪುರುಷದಲ್ಲಿ ಕಥನಿಸುವಾಗ ಕಥಾಗಾರನಿಗೆ ಹೆಚ್ಚು ಸ್ವಾತಂತ್ರ್ಯವಿದೆ ಎಂದು ನನ್ನ ನಂಬಿಕೆ. ಇತರರ

ಮಟ್ಟಿಗೆ ಈ ನಂಬಿಕೆ ಎಷ್ಟು ನಿಜವೋ ಕಾಣೆ. ಅದೇನೆ ಇರಲಿ, ಹಳೆಯ ಜಾಡನ್ನು ಬಿಟ್ಟು, ನೂತನ ವಿಧಾನವನ್ನು ಅವಲಂಬಿಸಿದ್ದರಿಂದ ನನಗಂತೂ ಹಳೆಯ ಸುಂಕು ಮುರಿದ ಸಮಾಧಾನವಿದೆ. ಇದು ಓದುಗರಿಗೆ ಈಡಾಗುತ್ತಾದರೂ ಹಿಡಿಸುವ ಪಕ್ಷಕ್ಕೆ ನನಗೆ ತೃಪ್ತಿಯಾಗುತ್ತದೆ.”[೧] ಎನ್ನುವ ಮಾತು ಇದನ್ನು ಓದಿದಾಗ ನಿಜವೆಂದು ತೋರಿಸುತ್ತದೆ.

ಈ ಪ್ರವಾಸ ಕಥನವನ್ನು ಅಧ್ಯಾಯನ ಮಾಡಿದ ಡಾ//ಮಳಲಿ ವಸಂತಕುಮಾರ್ ರವರು ಹೇಳುವಂತೆ “ನೂತನ ಅಭಿವ್ಯಕ್ತಿ ತಂತ್ರ; ಇಲ್ಲಿನ ಭೂಗೋಳಗಳ ತಲಸ್ಪರ್ಶಿ ಅಧ್ಯಯನ ಭಾರತ ಮತ್ತು ಅಮೇರಿಕಾ ದೇಶಗಳ ತೌಲನಿಕ ಪ್ರಜ್ಞೆ; ಗುಣಾವಗುಣಗಳ ವಸ್ತುನಿಷ್ಠಾ ದೃಷ್ಟಿಕೋನಗಳಿಂದಾಗಿ ಈ ಕೃತಿ ವಿಶಿಷ್ಟ ಪ್ರವಾಸ ಕಥನವಾಗಿದೆ”[೨] ಎಂದು ಹೇಳಿರುವುದನ್ನು ಗಮನಿಸಿದರೆ ಈ ಕಥನಕ್ಕೆ ಇವರು ಬಳಸಿರುವ ತಂತ್ರ ಪಲಪ್ರದವಾಗಿದೆ ಎನ್ನಿಸುತ್ತದೆ.

ಅಮೇರಿಕಾದಲ್ಲಿ ಲೇಖಕರ ಮಗಳು, ಆಳಿಯ ಮೊಮ್ಮಕ್ಕಳು ಇರುವುದರಿಂದ ಅನೇಕ ಸಲ ಹೋಗಿ ಬಂದಿದ್ದಾರೆ. ತಾವು ನೋಡಿರುವ ತಮಗೆ ತಿಳಿದಂತೆ ಕನ್ನಡಿಗರಿಗೆ ಪರಿಚಯಿಸಿಕೊಡಬೇಕೆನ್ನುವ ದೇಜಗೌ ರವರ ಉತ್ಸಾಹ ಅದಮ್ಯವಾದದ್ದೂ.

“ನಾನು ಕಂಡಿರುವ ಅಮೇರಿಕೆಯ ಸಾಂಸ್ಕೃತಿಕ ಮತ್ತು ಸಾಮಾಜಿಕ ಮುಖಗಳನ್ನು ಮತ್ತು ಅಮೇರಿಕೆಯ ಪ್ರತಿಭೆಯನ್ನು ಸಂಕ್ಷೇಪವಾಗಿಯಾದರೂ ಅದಷ್ಟು ವ್ಯಾಪಕವಾಗಿ ಚಿತ್ರಿಸಬೇಕು. ಅಮೇರಿಕಾ ಇಡೀ ಜಗತ್ತಿಗೆ ಕಣ್ಣೆಲೆಯಾಗಿ, ಆದರ್ಶವಾಗಿ, ಭವಿಷ್ಯದ ಭರವಸೆಯಾಗಿ ವಿಕಾಸಗೊಳ್ಳಲು ಕಾರಣವಾದ ನಿಸರ್ಗ ಮತ್ತು ಮನುಷ್ಯ ಶಕ್ತಿಗಳನ್ನು ಅಲ್ಪ ಪ್ರಮಾಣದಲ್ಲಾದರೂ ಕುಂಚಿಸಬೇಕು; ಆದೇಶದ ಸರ್ವತೋಮುಖವಾದ ಅಭ್ಯುಧಯಕ್ಕೆ ನಿಸರ್ಗ ಸಂಪತ್ತು ಮಾತ್ರವೇ ಮುಖ್ಯವಲ್ಲ; ಅಲ್ಲಿನ ಜನರ ದುಡಿಮೆ, ಸಾಹಸ ಮನೋಧರ್ಮ, ಆತ್ಮಪ್ರತ್ಯಯ ಸ್ವಾತಂತ್ರ್ಯವೇ ಮೊದಲಾದ ತತ್ವಗಳನ್ನು ಒಳಗೊಂಡ ಅಮೇರಿಕಾ ಸಂಹಿತೆಯನ್ನು ನಮ್ಮ ಜನರಿಗೆ ಮನದಟ್ಟು ಮಾಡಿಕೊಡಬೇಕು; ಜಾತೀಯ, ಮತೀಯ ಭಾವನೆಗಳು ಮನೆ ಅಥವಾ ಚರ್ಚುಗಳೊಳಗೆ ಬಂಧನಗೊಳ್ಳಬೇಕೆ ಹೊರತು, ಅವು ಹಾದಿಬೀದಿಗಳಲ್ಲಿ, ಮೆರವಣಿಗೆ ಸಮಾರಂಭಗಳಲ್ಲಿ, ಸಾರ್ವಜನಿಕ ಕ್ಷೇತ್ರಗಳಲ್ಲಿ, ಚುನಾವಣೆಗಳಲ್ಲಿ, ರಾಜಕೀಯಾರ್ಥಿಕಾದಿ

ಲೌಖಿಕ ವ್ಯವಹಾರಗಳಲ್ಲಿ ವಿಜೃಂಭಿಸ ಬಾರದೆಂಬುದೇ ಆ ಜನರ ಆಶಯ ಎಂಬುದನ್ನು ಇಂಡಿಯಾ ನಾಯಕರರಿಯಬೇಕು. ವಿವೇಕಾನಂದೋಪದೇಶದ ಬೆಳಕಿನಲ್ಲಿ ಭಾರತೀಯ ಸಂಹಿತೆಯನ್ನು ರೂಪಿಸಿಕೊಳ್ಳುವಲ್ಲಿ ಸ್ವಲ್ಪಮಟ್ಟಿಗಾದರೂ ಅಮೇರಿಕಾ ಸಂಹಿತೆಯ ಹಿನ್ನೆಲೆ ಯುವ ಪೀಳಿಕೆಗೆ ಕಾಣಿಸಿಕೊಳ್ಳುತ್ತವೆ. ನನ್ನ ಅನುಭವಗಳಿಗೆ ಅಭಿವ್ಯಕ್ತಿ ನೀಡಬೇಕೆಂಬುದೇ ಈ ರಚನೆಯ ಉದ್ದೇಶ"[3] ಎಂದು ತಮ್ಮ ಪ್ರವಾಸ ಕಥನದ ಉದ್ದೇಶವನ್ನು ತಿಳಿಸಿದ್ದಾರೆ.

ದೇಜಗೌರವರು ತಮ್ಮ ಈ ಕೃತಿಯಲ್ಲಿ ಅಮೇರಿಕಾ ನಿಸರ್ಗ ಸಂಪತ್ತು, ವೈಜ್ಞಾನಿಕ, ತಾಂತ್ರಿಕ ಪ್ರಗತಿ, ಸುಖಸಾಧನಗಳ ದುಂದುಗಾರಿಕೆ, ಉದಾರ ನೀತಿಯ ರಾಜಕೀಯ ವ್ಯವಸ್ಥೆ, ಬಹುದೇಶೀಯರ ವಲಸೆ, ಮುಕ್ತ ಪರಿಸ್ಥಿತಿ, ಈ ವೈಶಿಷ್ಟ್ಯಗಳನ್ನು ಸವಿವರವಾಗಿ ನಿರೂಪಿಸಿದಾರೆ. ಆ ದೇಶದ ಪ್ರಮುಖ ನಗರಗಳಿಗೆ ಭೇಟಿ ನೀಡಿ ಅಲ್ಲಿನ ಜೀವನವನ್ನು ಸ್ಥೂಲವಾಗಿ ಅಧ್ಯಾಯನ ಮಾಡಿದ್ದಾರೆ. ಅಮೇರಿಕೆಯಲ್ಲಿ ನೆಲೆಸಿರುವ ಭಾರತೀಯರು ಸೇರಿದಂತೆ ಚೀನಿಯರು, ಸಿಖ್ಖರೂ, ಇತ್ಯಾದಿ ತಮ್ಮ ತಮ್ಮ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳಲು ನಡೆಸುತ್ತಿರುವ ಪ್ರಯತ್ನವನ್ನಿಲ್ಲಿ ವಿವರಿಸಿರುವುದನ್ನು ಕಾಣಬಹುದಾಗಿದೆ.

ಬೇರೆ ದೇಶಗಳಿಗೂ ಅಮೇರಿಕಾಗೂ ಇರುವ ವ್ಯತ್ಯಾಸವೆಂದರೆ ಅಲ್ಲಿ ಗುಟ್ಟಾಗಿ ನಡೆಯುವಂತಹದ್ದು ಇಲ್ಲಿ ಬಹಿರಂಗವಾಗಿ ನಡೆಯುತ್ತದೆ. ಮುಚ್ಚುಮರೆ ಇಲ್ಲ ಅದು ಈ ದೇಶದ ಗುಣವೂ ಹೌದು, ದೌರ್ಬಲ್ಯವೂ ಹೌದು, ಎಂದು ತೀಳಿಸುತ್ತಾರೆ.

ಈ ದೇಶದಲ್ಲಿ ಆರೋಗ್ಯ ವಿಮೆ ಸೌಕರ್ಯವಿದ್ದು ರೋಗಿಗಳ ವೆಚ್ಚವೆಲ್ಲಾ ವಿಮೆಯ ಮೂಲಕ ದೊರಕುತ್ತದೆ. ಸರ್ಕಾರ ಅಲ್ಪದಾಯಿ ವೈದ್ಯ ಸಹಾಯ ಮತ್ತು ವೃದ್ದಾಪ್ಯ ಸಹಾಯವನ್ನು ಸಹ ನೀಡುತ್ತದೆ ಎಂದು ಕೊಂಡಾಡಿದ್ದಾರೆ.

ಅಮೇರಿಕಾವು ಜಗತ್ತಿನ ಪ್ರಬಲ, ಶ್ರೀಮಂತ ಹಾಗೂ ಆರ್ಥಿಕ ಅಭಿವೃದ್ದಿ ಹೊಂದಿದ ರಾಷ್ಟ್ರ. ಉತ್ತರ ಅಮೇರಿಕಾ ಖಂಡದಲ್ಲಿರುವ ಅಮೇರಿಕಾ ಸಂಯುಕ್ತ ಸಂಸ್ಥಾನ (ಯು.ಎಸ್.ಎ) ಪ್ರಪಂಚದ ನಾಲ್ಕನೇ ಅತಿ ದೊಡ್ಡ ದೇಶ. ಮತ್ತು ಜನಸಂಖ್ಯೆಯಲ್ಲಿ ಕಡಿಮೆ ಹೊಂದಿರುವ ದೇಶವಾಗಿದೆ. ರಕ್ಷಣಾ ಕ್ಷೇತ್ರದಲ್ಲಿ ಅತೀ ಹೆಚ್ಚು

ವೆಚ್ಚ ಮಾಡುತ್ತಿದ್ದು, ವೈಜ್ಞಾನಿಕವಾಗಿ ಹಲವು ಸಂಶೋಧನೆಗಳನ್ನು ನಡೆಸುತ್ತಿರುವ ವಿಸ್ಮಯಗಳ ರಾಷ್ಟ್ರವಾಗಿದೆ.

ಇದರ ರಾಜದಾನಿ ವಾಷಿಂಗ್‌ಟನ್. ಇಲ್ಲಿನ ಹಣಕಾಸು ವ್ಯವಹಾರವೆಲ್ಲಾ ಡಾಲರ್ ರೂಪದಲ್ಲಿ ನಡೆಯುತ್ತದೆ. ಅಲ್ಲದೆ ಜಾಗತಿಕ ವ್ಯವಹಾರವು ಡಾಲರ್‌ನಲ್ಲಿಯೇ ನಡೆಯುತ್ತದೆ. ಭಾರತದ ರೂಪಾಯಿ ಡಾಲರ್ ಎದುರು ಹಲವಾರು ಬಾರಿ ಅಪಮೌಲ್ಯಗೊಳಗಾಗಿರುವುದನ್ನು ಕಾಣಬಹುದು. ಪ್ರಸ್ತುತ ೧ ಅಮೇರಿಕಾ ಡಾಲರ್‌ಗೆ ೬೧.೭೨ ರೂಪಾಯಿಯವರೆಗೂ ಭಾರತದ ರೂಪಾಯಿ ಅಪಮೌಲ್ಯಗೊಳಗಾಗಿ ಸಂಕಷ್ಟಕ್ಕೆ ಸಿಲುಕ್ಕಿದೆ ಅಲ್ಲದೆ ಬೆಲೆ ಎರಿಕೆಯಿಂದ ತತ್ತರಿಸಿರುವುದನ್ನು ನೋಡಬಹುದಾಗಿದೆ.

ಜಗತ್ತಿನಲ್ಲಯೇ ಅತೀ ಚಿಕ್ಕ ಸಂವಿಧಾನವನ್ನು ಹೊಂದಿರುವ ಇದು ನಾಲ್ಕು ವರ್ಷಗಳಿಗೊಮ್ಮೆ ಚುನಾವಣೆಯನ್ನು ನಡೆಸುತ್ತದೆ. ದ್ವಿಪಕ್ಷ ಪದ್ಧತಿಯನ್ನು ಹೊಂದಿರುವ ಇಲ್ಲಿ ಪ್ರಸ್ತುತ ಡೆಮಾಕ್ರೆಟಿಕ್ ಪಕ್ಷದ ಬರಾಕ್ ಒಬಾಮ ೪೪ ಅಧ್ಯಕ್ಷರಾಗಿ ಆಳ್ವಿಕೆ ನಡೆಸುತ್ತಿದ್ದಾರೆ. ಇವರು ಅಫ್ರೀಕಾ-ಅಮೇರಿಕಾದ ಮೊದಲ ಅಧ್ಯಕ್ಷರಾಗಿದ್ದಾರೆ. ತಮ್ಮದೇ ಹೊಸ ರೀತಿ ಮಾತುಗಾರಿಕೆ, ಯುದ್ಧನೀತಿಯಿಂದ ವಿಶ್ವದ ಗಮನ ಸೆಳೆದಿದ್ದಾರೆ. ಅಲ್ಲದೆ ವಿಶ್ವದ ಅನೇಕ ರಾಷ್ಟ್ರಗಳೊಂದಿಗೆ ಸ್ನೇಹ, ಸಹಕಾರದಿಂದ ವಿಶ್ವಶಾಂತಿಗೆ ಶ್ರಮಿಸಿದ ಇವರಿಗೆ ೨೦೦೯ ರಲ್ಲಿ ಶಾಂತಿಗಾಗಿ ನೋಬಲ್ ಪ್ರಶಸ್ತಿ ಬಂದಿರುವುದನ್ನು ಸ್ಮರಿಸಬಹುದಾಗಿದೆ.

ಅಮೇರಿಕಾದ ಸುಮಾರು ಮೂರು ಶತಮಾನಗಳಲ್ಲಿ ಅದರ ಶಕ್ತಿ ಸಾಮರ್ಥ್ಯಗಳನ್ನು ಪರೀಕ್ಷೆಗೊಡ್ಡಬೇಕಾಯಿತು.

೧) ಸ್ವತಂತ್ರ ಸಮರ,

೨) ಅಂತರ್ಯುದ್ಧ,

೩) ಕರಿಯರ ನಾಗರೀಕ ಹಕ್ಕು ಚಳುವಳಿ

ಈ ಎಲ್ಲಾ ಯುದ್ಧಗಳಿಂದ ವಿಜಯ ಸಾಧಿಸಿ ೧೭೭೬ ಜುಲೈ ೦೬ ರಂದು ಸ್ವತಂತ್ರ್ಯವನ್ನು ಪಡೆಯಿತು. ಅಂದಿನಿಂದ ಇಂದಿನವರೆಗೂ ಹಿಂದೆ ನೋಡದೇ ಪ್ರಗತಿಯ ಪಥದಲ್ಲಿ ಸಾಗುತ್ತಿದೆ.

"ಅಮೇರಿಕೆಯ ಸ್ವತಂತ್ರ ಸಮರದೊಡನೆ ಭಾರತೀಯ ಸ್ವತಂತ್ರ್ಯ ಸಮರವನ್ನು ಹೋಲಿಸಿಕೊಂಡು ಮಹತ್ವ ಕೊಡುವುದಾದರೆ ಎರಡು ಸಮರಗಳ ನಡುವೆ ಒಂದು ಶತಮಾನಕ್ಕೂ ಹೆಚ್ಚು ಅಂತರವಿದೆ. ಒಂದೇ ಕುಟುಂಬದೊಳಗೆ ಅನೇಕ ಅಮೇರಿಕಾ ಕದನ ರಕ್ತ ಪ್ರವಾಹದೊಡನೆ ನಾಲ್ಕೈದು ವರ್ಷದಲ್ಲಿ ಮುಕ್ತಾಯಗೊಳ್ಳತ್ತದೆ. ಭಾರತೀಯ ಸ್ವತಂತ್ರ ಸಂಗ್ರಾಮ ಎರಡು ಭಿನ್ನ ಜನಾಂಗಗಳ ನಡುವಣದಾದರೂ ಅಹಿಂಸಾತ್ಮಕವಾದ್ದರಿಂದ ಅರ್ಧ ಶತಮಾನಗಳಷ್ಟು ಎಳೆಯುತ್ತದೆ. ಅದೊಂದು ಮಹಾ ತ್ಯಾಗದ ಕಥೆ ನೂರಾರು ಮಂದಿ ಭಾರತೀಯರು ಆಂಗ್ಲರ ಮದ್ದು ಗುಂಡುಗಳಿಗೆ ತುತ್ತಾದರೂ, ಲಕ್ಷಾಂತರ ಮಂದಿ ಜೈಲುಗಳಲ್ಲಿ ಕೊಳೆತರೂ, ಕೊನೆಗೆ ಅಸುರೀಶಕ್ತಿ ಸಾತ್ವಿಕ ಶಕ್ತಿಗೆ ಶರಣಾಗುತ್ತದೆ. ಆದರೆ ಸ್ವತಂತ್ರ್ಯ ನಂತರ ಅಮೇರಿಕಾ ನಾಗಲೋಟದಿಂದ ಪ್ರಗತಿ ಸಾಧಿಸುತ್ತಿದೆ. ಭಾರತ ಪ್ರಗತಿ ಕುಂಟುತ್ತಿರುವುದನ್ನ ಪ್ರಸ್ತುತವು ಕಾಣಬಹುದಾಗಿದೆ."[೪]

ಅಮೇರಿಕಾದಲ್ಲಿ ಪ್ರಾಕೃತಿಕ ಸಂಪತ್ತು ಸಮೃದ್ಧವಾಗಿದ್ದು ಎಲ್ಲಾರು ದುಡಿದು ಸುಖ ಜೀವನ ನಡೆಸುತ್ತಾರೆ. ಇಲ್ಲಿರುವ ವ್ಯಕ್ತಿ ಸ್ವತಂತ್ರ್ಯ ಬೇರೆಡೆಯಲ್ಲಿಯೂ ಕಾಣಲಾಗುವುದಿಲ್ಲ. ಇಲ್ಲಿ ಅಮೇರಿಕಾದವರೂ ಮಾತ್ರವಲ್ಲದೇ ಚೀನಾ, ಜಪಾನ್, ಭಾರತ ಹಾಗೂ ವಿಶ್ವದ ನಾನಾ ದೇಶದ ಜನರನ್ನು ಇಲ್ಲಿ ನೆಲೆಸಿದ್ದಾರೆ.

ಇಲ್ಲಿಯ ರಾಷ್ಟ್ರೀಯತೆಯ ಮುಖ್ಯ ಲಕ್ಷಣವೆಂದರೆ ಜಗತ್ತಿನ ಎಲ್ಲಾ ಜನಾಂಗಗಳು ಎಲ್ಲಾ ಮತೀಯರು, ಎಲ್ಲಾ ಬಣ್ಣದವರು ಹಲವು ಸಂಸ್ಕೃತಿ ಹಿನ್ನೆಲೆಯಿಂದ ಬಂದವರು ಮತ್ತು ಬಹುಭಾಷಾ ಪ್ರಯೋಗಿಗಳು ತಮ್ಮತನವನ್ನು ಸಮಷ್ಠಿಯಲ್ಲಿ ಕರಗಿಸಿ ಒಂದಾಗಿ ಬಾಳುತ್ತಿದ್ದಾರೆ. ಅಮೇರಿಕಾ ಸಂಹಿತೆ ವಿಶಿಷ್ಟವಾದದ್ದು, ಸರ್ಕಾರಕ್ಕೆ ಎಲ್ಲಾ ಅಧಿಕಾರಿಗಳು ಪ್ರಜೆಗಳಿಂದ ದತ್ತವಾಗಿದೆ. ಇಲ್ಲಿಯದು ಜನರಿಂದ ಜನರಿಗಾಗಿ, ಇರುವ ಜನರ ಸರ್ಕಾರ. ಪ್ರಜಾಸತ್ತಾತ್ಮಕ ಗಣರಾಜ್ಯವಿದು. ಹಲವು ಸರ್ವ ಸ್ವತಂತ್ರಗಳ ರಾಜ್ಯಗಳ ಸುಸ್ವತಂತ್ರ ರಾಷ್ಟ್ರವಿದು ಅಮೇರಿಕಾದ ದೇಶಾಭಿಮಾನಿಗಳ ತನುಮನ ತ್ಯಾಗದಿಂದ ಸ್ವತಂತ್ರ್ಯ ಸಮಾನತೆ, ನ್ಯಾಯ, ಮತ್ತು ಮಾನವತಾ ತತ್ವಗಳ ಆಧಾರದ ಮೇಲೆ ಸ್ಥಾಪನೆಗೊಂಡ ಅಖಂಡ ರಾಷ್ಟ್ರವಿದು. ತನ್ನ ರಾಷ್ಟ್ರವನ್ನ, ರಾಜ್ಯಾಂಗವನ್ನ, ರಾಷ್ಟ್ರಧ್ವಜವನ್ನ, ಗೌರವಿಸುವುದು ಮತ್ತು ರಕ್ಷಿಸುವುದು ತನ್ನ

ಕರ್ತವ್ಯವೆಂದು ಅಲ್ಲಿನ ಪ್ರತಿಯೊಬ್ಬ ಪ್ರಜೆಯು ತಿಳಿದು ಅದರಂತೆ ನಡೆಯುತ್ತಿರುವುದು ಪ್ರಸಂಸಿಸಿದ್ದಾರೆ.

ಅಮೇರಿಕಾ ವೈವಿಧ್ಯಮಯ ಸರ್ವ ಸಂಸ್ಕೃತಿ ಸಮ್ಮಿಲನದ ದೇಶ. "ಇಲ್ಲಿ ಹಲವು ಜನಾಂಗಗಳು ಒಟ್ಟಿಗೆ ಬದುಕು ನಡೆಸುವಾಗ ಸಾಂಸ್ಕೃತಿಕ ವಿಲಯನ ಅನಿವಾರ್ಯ ಬಹು ಸಂಖ್ಯಾತ ಸಂಸ್ಕೃತಿ ಅಥವಾ ಪ್ರಬಲ ಸಂಸ್ಕೃತಿ ದುರ್ಬಲ ಅಥವಾ ಅಲ್ಪ ಸಂಖ್ಯಾತ ಸಂಸ್ಕೃತಿಯನ್ನು ಕೊಚ್ಚಿಬಿಡುತ್ತದೆ ಎನ್ನುವುದಕ್ಕಿಂತ ದೊಡ್ಡದು ಸಣ್ಣದನ್ನು ಹೀರಿಕೊಳ್ಳುತ್ತದೆ ಎಂದು ಹೇಳಬೇಕು. ಆರ್ಯ ದ್ರಾವಿಡ ಸಂಸ್ಕೃತಿಗಳು ಒಂದು ಕಡೆ ಸೇರಿದಾಗ ಅದಾದ್ದೇ ಹೀಗೆ ಇಲ್ಲಿಯ ಭಾಷೆ, ಸಂಗೀತ, ಶಿಲ್ಪ, ನೃತ್ಯ ಮತ್ತು ಕ್ರೀಡೆಗಳ ಮೇಲೆ ಕರಿಯರ ಮುದ್ರೆಯನ್ನು ಗುರುತಿಸಲು ಸಾಧ್ಯವಿದೆ. ಕೆಲವು ವರ್ಷಗಳ ನಂತರ ಏಷಿಯಾ ಜನರ ವೈಶಿಷ್ಟ್ಯಗಳು ಅಮೇರಿಕಾ ಸಂಸ್ಕೃತಿಯಲ್ಲಿ ಸೇರಿಕೊಳ್ಳುತ್ತವೆಂದು ತೋರುತ್ತದೆ. ಯಾವ ರಾಷ್ಟ್ರದಲ್ಲಿ ಅಲ್ಪಸಂಖ್ಯಾತ ಸಂಸ್ಕೃತಿ ಬಹುಸಂಖ್ಯಾತ ಸಂಸ್ಕೃತಿಯಲ್ಲಿ ವಿಲಯನಗೊಳ್ಳುತ್ತದೆಯೋ ಅಂತಹ ರಾಷ್ಟ್ರ ಸುಭದ್ರವಾಗಿ ಸುಪ್ರಬಲವಾಗಿ ಬೆಳೆಯುತ್ತದೆ. ಅಲ್ಲದೆ ತೆರೆದ ಸಂಕೀರ್ಣ ಸಂಸ್ಕೃತಿ ಯಾವಾಗಲೂ ಪ್ರಗತಿ ಪರವಾದದ್ದು, ಪರಸಂಸ್ಕೃತಿಯನ್ನು ದ್ವೇಷಿಸುವ ತನ್ನ ಸುತ್ತ ಗೋಡೆ ಸೃಷ್ಟಿಸಿಕೊಂಡಿರುವ ಸಂಸ್ಕೃತಿ ಪ್ರತಿಗಾಮಿಯಾಗಿ ಜಗತ್ತಿಗೆ ಕಂಟಕವಾಗುತ್ತದೆ."[೫] ಎಂಬುದು ಅಮೆರಿಕನ್ನರ ತತ್ವವಾಗಿದೆ ಎಂಬುದನ್ನು ದೇ.ಜ.ಗೌ ರವರು ತಮ್ಮ ಪ್ರವಾಸದ ಕಥನದಲ್ಲಿ ದಾಖಲಿಸಿದ್ದಾರೆ.

ಅಮೇರಿಕಾ ವೈವಿದ್ಯಮಯ ಸರ್ವ ಸಂಸ್ಕೃತಿ ಸಮ್ಮಿಲನದ ದೇಶವೆನ್ನುವುದಕ್ಕೆ ಜಗತ್ತಿನ ಎಲ್ಲಾ ಜನಾಂಗಗಳ ಆಹಾರ ಸಂಪ್ರದಾಯಗಳ ಪ್ರಚುರ್ಯವೇ ಸಾಕ್ಷಿಯಾಗಿದೆ. ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಅಮೇರಿಕಾ ಭೂತ ವರ್ತಮಾನ ಕಾಲಗಳ ಜಗತ್ತಿನ ಎಲ್ಲಾ ಜನಾಂಗಗಳ ಮತ್ತು ರಾಷ್ಟ್ರಗಳ ಸಂಗಮದಂತಿದ್ದು, ಪ್ರವಾಸಿಗರ ಸ್ವರ್ಗ, ಜ್ಞಾನಭಿಕ್ಷುಗಳ ಸ್ವರಸ್ವತಿ ಮಂದಿರ, ಸಂಶೋಧಕರ ಕಾರ್ಯಗಾರ. ಇಲ್ಲಿ ಅಲಂಕರಣ ಕಲಾ ವಸ್ತುಗಳಿವೆ. ಸುಮೇರಿಯನ್ ಶಿಲ್ಪಾಗಳಿವೆ ಅನಾಟೋಲಿಯಾ ದಂತದ ಕೆತ್ತೆನೆಗಳಿವೆ, ಇರಾನಿನ ಕಂಚಿನ ಕೆತ್ತನೆಗಳಿಗೆ, ಸಸಾನಿಯನ್ ಮತ್ತು ಅಕೇಮಿನಿಯನ್ ಬೆಳ್ಳಿ ಚಿನ್ನದ ಕಲಾಕೃತಿಗಳಿವೆ, ಏಷ್ಯಾ ಮತ್ತು ಯುರೋಪ ಖಂಡಗಳಿಂದ ಸಂಗ್ರಹಿಸಿದ ಸಾವಿರಾರು ಆಯುಧಗಳಿವೆ ಚೀನಾ,

ಜಪಾನ್, ಕೋರಿಯಾ, ಇಂಡಿಯಾ, ಮತ್ತು ಆಗ್ನೇಯಾ ಏಷಿಯಾದಿಂದ ತಂದ ಪ್ರಾಚೀನ ವಸ್ತುಗಳಿವೆ. ಇಸ್ಲಾಂ ಕಲಾ ವಸ್ತುಗಳು, ಮಡಿಕೆ-ಕುಡಿಕೆ, ಗಾಜು ಲೋಹಗಳ ತಯಾರಿಕೆಗಳು ಮತ್ತು ರತ್ನಗಂಬಳಿಗಳು ಅಮೇರಿಕಾದ ವಸ್ತು ಸಂಗ್ರಹಾಲಯದಲ್ಲಿ ಇರುವುದನ್ನ ಕಾಣಬಹುದಾಗಿದೆ.

ದೇಜಗೌರವರು ಅಮೆರಿಕಾದ ತಂದೆತಾಯಿಯರು ಮಕ್ಕಳನ್ನು ಬೆಳೆಸುವ ಪರಿಯ ಬಗ್ಗೆ ತಿಳಿಸಲು ಪ್ರಯತ್ನಿಸಿದ್ದಾರೆ. ಮಕ್ಕಳು ದೊಡ್ಡವಾದ ಮೇಲೆ ಅವರ ಪಾಡಿಗೆ ಅವರನ್ನು ಬೆಳೆಯಲು ಬಿಡುತ್ತಾಂಕ್ಕಿದರಿಂದ ಚಿಕ್ಕವಯಸ್ಸನಲ್ಲಿ ದುಡಿದು ತಮ್ಮ ಕಾಲ ಮೇಲೆ ನಿಲ್ಲುವುದನ್ನು ಕಲಿಸಸಿದ ತೃಪ್ತಿ ತಂದೆತಾಯಿಗಿದ್ದರೆ, ಸ್ವತಂತ್ರರಾಗಿ ಹೇಗಂದರಾಗೆ ಇರುವ ತೃಪ್ತಿ ಮಕ್ಕಳದಾಗಿರುತ್ತದೆ. ಇವರು ತಮಗೆ ಬೇಕಾದ ಸಂಗಾತಿಗಳನ್ನು ತಾವೇ ಆರಿಸಿಕೊಂಡು ಜೀವನ ನೆಡೆಸುತ್ತಾರೆ. ಅವರೊಂದಿಗೆ ಸರಸ ಸಲ್ಲಾಪದಲ್ಲಿ ತೋಡಗುತ್ತಾರೆ. ಅಮೆರಿಕಾದಲ್ಲಿ ಪೌಢಶಾಲೆಯ ಮಕ್ಕಳೂ ಸಹ ಗರ್ಭವತಿಯಾ ನಿದರ್ಶನಗಳು ಹೆಚ್ಚೆಂದು ತಿಳಿಸುತ್ತಾರೆ.

ಅಮೆರಕಾ ದೇಶಾದಲ್ಲಿ ಭಾರದಲ್ಲಿನ ಮದುವೆಯ ಕಟ್ಟುನಿಟ್ಟು, ನಿಯಮಗಳು ಇಲ್ಲವೇ ಇಲ್ಲ. ಅವರಲ್ಲಿ ಎಷ್ಟು ಜನರನ್ನು ಮದುವೆಯಾಗಬಹುದು, ಅದರಂತೆ ಅವರಲ್ಲಿರುವ ವಿಚ್ಚೇದನವು ಬಹಳ ಸುಲಭವಾದುದಾಗಿದ್ದು ಒಬ್ಬಬ್ಬರು ಸಹ ನಾಲ್ಕೈದು ಮದುವೆಯಾಗಿ, ವಿಚ್ಚೇದನ ಪಡೆದಿರುವುದು ಉಂಟು.

ದೇಜಗೌರವರು ಈ ಪ್ರವಾಸ ಕಥನದಲ್ಲಿ ಅಮೇರಿಕನ್ನರ ಮತ್ತು ಭಾರತೀಯರ ನಡುವಿನ ದುಡಿಮೆ ವ್ಯತ್ಯಾಸವನ್ನು, ದುಡಿಮೆಯ ಮಹತ್ವವನ್ನು ವಿವರಿಸಿದ್ದಾರೆ.

ಅಮೇರಿಕಾದ ಜನ ವಾರಕ್ಕೆ ಐದು ದಿನ, ದಿನಕ್ಕೆ ಎಂಟು ಗಂಟೆ ಸುತಾರಾಂ ದುಡಿಯುತ್ತಾರೆ. ತಲೆಯ ಮೇಲೆ ತಲೆ ಬಿದ್ದರು ಅವರ ಆ ದಿನಗಳಲ್ಲಿ ಕರ್ತವ್ಯ ಚ್ಯುತರಾಗುವುದಿಲ್ಲ. ಉಳಿದೆರಡು ದಿನ ರಜ. ರಜೆಯಲ್ಲಿ ಮನೆಗೆಲಸ ಇದ್ದೆಇರುತ್ತದೆ. ಇಲ್ಲವೇ ಪ್ರೇಕ್ಷಣೀಯ ಸ್ಥಳಗಳಿಗೆ ವಿಹಾರಯಾತ್ರೆ ಕೈಗೊಳ್ಳುತ್ತಾರೆ. ಖಾಸಗಿ ವೈದ್ಯರಿಗೆ ರಜ ದಿನಗಳಲ್ಲಿಯೂ ಅಲ್ಪ ಸ್ವಲ್ಪ ಕೆಲಸವಿರುತ್ತದೆ. ಅದರೂ ನೆಂಟರಿಷ್ಟರು ಬಂದಾಗ ಅವರಿಗಾಗಿ ವಿರಾಮ ಮಾಡಿಕೊಳ್ಳುತ್ತಾರೆ.

ಭಾರತದಲ್ಲಿ ಶಿವಶರಣರು ಬಿತ್ತಿದ ಕಾಯಕತತ್ವ ಅಮೇರಿಕಾದಲ್ಲಿ ಫಲ ಕೊಡುತ್ತಿದೆ. ಕೆಲಸಕ್ಕೊಸ್ಕರ ಊಟ, ತಿಂಡಿ, ಮತ್ತು ಇನ್ನಿತರ ಸರ್ವಸ್ವವನ್ನು ತ್ಯಾಗ ಮಾಡಲು ಸಿದ್ದರಿರುತ್ತಾರೆ. ಆದರೆ ಭಾರತದಲ್ಲಿ ಪ್ರಾಮಾಣಿಕವಾಗಿ ದುಡಿಯುವ ಸಂಖ್ಯೆ ಕಡಿಮೆ ಶೇಕಡಾ ಹತ್ತು ಭಾಗ ಪೂರ್ಣ ದುಡಿಯುವವರು ಸಿಕ್ಕಿದರೆ ಪುಣ್ಯವೇ ಸರಿ. ದೇಶ ಕ್ಷೇಮವಾಗಲಿ, ದೇಶಾಭಿಮಾನವಾಗಲಿ, ದೊಡ್ಡವರಲ್ಲಿಯೂ ಶೂನ್ಯ. ದುಡಿಯದೇ ಮಜಾ ಮಾಡಬೇಕ್ಕೆನ್ನುವ ಗುಂಪೆ ದೊಡ್ಡದು, ಇಲ್ಲಿ ರಾಜಕೀಯ ಮುಖಂಡರ ಕೈವಾಡ ಇರುವುದು ಕಂಡುಬಂದರೆ ಅಮೇರಿಕಾದಲ್ಲಿ ಯಾವುದೇ ರಾಜಕೀಯ ಮುಖಂಡ ಅಥವಾ ಇಲಾಖೆಯ, ಅಥವಾ ಕಂಪನಿಯು ಒಳಾಡಳಿತದಲ್ಲಿ ತಲೆ ಹಾಕುವುದಿಲ್ಲ. ಸಾರ್ವಜನಿಕ ರಜ ದಿನಗಳ ಜೊತೆಗೆ ೧೦-೧೫ ದಿನ ಜರೂರು ರಜೆ ಉಂಟು ಆದರೆ ರಜ ದಿನಗಳು ತನ್ನ ಹಕ್ಕೆಂದು ಭಾವಿಸದೆ ದುಡಿಯುವವರು ಅಮೇರಿಕಾದಲ್ಲಿ ಕಂಡುಬಂದರೆ, ಭಾರತದಲ್ಲಿ ನೌಕರರು ಸಂಪೂರ್ಣ ರಜದಲ್ಲಿಯೇ ಕಳೆಯುವ ಪ್ರವೃತ್ತಿಯೂ ಉಂಟು.

ಅಮೇರಿಕಾದಲ್ಲಿ ಆಳು-ಒಡೆಯ, ಮೇಲು-ಕೀಳು, ಎಂಬ ಭೇದವಿಲ್ಲ. ದೇಶದಲ್ಲಿ ಬುದ್ಧಿವಂತರಿಗೆ ದುಡಿಯುವವರಿಗೆ ಕೆಲಸದ ಕೊರತೆಯೇನು ಇಲ್ಲ. ಆದರೆ ಭಾರತದಲ್ಲಿ ದುಡಿಯುವವರೆಗೂ ಮತ್ತು ದುಡಿಸಿಕೊಳ್ಳುವವರಿಗೂ ಭೇದ ಮಾತ್ರವಲ್ಲದೆ ಬುದ್ಧಿವಂತರು ಸರ್ಕಾರಿ ಕೆಲಸದಿಂದ ವಂಚಿತರಾಗಿರುವುದನ್ನ ಕಾಣಬಹುದು.

ಭಾರತದಲ್ಲಿ ಹಿಂದೂ ಧರ್ಮದಲ್ಲಿದ್ದ ಪುನರ್ಜನ್ಮ ಕರ್ಮ ಸಿದ್ದಾಂತ ಎಲ್ಲಾ ಮತೀಯರಿಂದ (ಧರ್ಮದವರಿಂದ) ಟೀಕೆಗೆ ಮತ್ತು ವಿಚಾರವಾದಿಗಳ ಖಂಡನೆಗೆ ಗುರಿಯಾಗಿತ್ತು. ಆದರೆ ಇಂದು ಪುನರ್ಜನ್ಮ ಸಿದ್ಧಾಂತಗಳಿಗೆ ದೇಶ ವಿದೇಶಗಳಲ್ಲಿ ಅಮೇರಿಕಾ ಸೇರಿದಂತೆ ಮನೋವಿಜ್ಞಾನದಲ್ಲಿ ತಜ್ಞರ ಸಂಶೋಧನಾ ವಿಷಯವಾಗಿದೆ.

ರಷ್ಯಾ, ಬಲ್ಗೇರಿಯಾ, ಅಮೇರಿಕಾ ಮೊದಲಾದ ದೇಶಗಳಲ್ಲಿ ಪರಮನೋವಿಜ್ಞಾನದ ಸಂಶೋಧನಾಂಗಗಳನ್ನ ಸ್ಥಾಪನೆ ಮಾಡಿಕೊಂಡು ಅಧ್ಯಯನಗಳು ತೀವ್ರಗತಿಯಲ್ಲಿ ಸಾಗುತ್ತಿದೆ. ಸಂವೇದನೆ, ಪೂರ್ವಪ್ರಜ್ಞೆ, ಮನಃಪ್ರೇರಿತ ವಸ್ತು ಚಾಲನೆ, ಅತೀಂದ್ರಯ ಸಂವೇದನೆ ಇವೇ ಮೊದಲಾದ ಮಾನಸಿಕ ಕ್ರಿಯೆಗಳು ನಿಜವೆಂಬುದನ್ನ ಇತ್ತೀಚಿನ ಸಂಶೋಧನೆಗಳು ತಿಳಿಸುತ್ತವೆ.

ಹಿಂದಿನ ಜನ್ಮದಲ್ಲಿ ಪುನರ್ಜನ್ಮದ ಕಥೆಯನ್ನ ತಮ್ಮ ಕಥನದಲ್ಲಿ ನಿದರ್ಶನಗಳ ಮೂಲಕ ತಿಳಿಸಿದ್ದು ಇದು ಕೇವಲ ಮನುಷ್ಯರಲ್ಲಿ ಮಾತ್ರವಲ್ಲದೆ ತರುಪಶುಗಳಲ್ಲಿಯೂ ಇದೇ ಎಂಬುದನ್ನ ಮನೋವಿಜ್ಞಾನಿಗಳು ತಿಳಿಸಿರುವುದನ್ನ ದಾಖಲಿಸಿದ್ದಾರೆ.

ಅಮೇರಿಕಾದಲ್ಲಿರುವ ರಸ್ತೆ ನಿಯಮಗಳನ್ನು ಮೆಚ್ಚಲೇಬೇಕು. ರಸ್ತೆಯ ಅಕ್ಕ ಪಕ್ಕದಲ್ಲಿರುವ ನಾಮಫಲಕದ ರೀತಿಯಲ್ಲಿ ರಸ್ತೆ ನಿಯಮಗಳನ್ನು ಪಾಲಿಸಬೇಕು. ಅತೀ ವೇಗವಾಗಿ ವಾಹನಗಳನ್ನ ಓಡಿಸುವಂತಿಲ್ಲ. ವಾಹನಗಳಿಂದ ವಾಹನಕ್ಕೆ ಅಂತರವನ್ನ ಕಾಯ್ದಿರಿಸಿಕೊಂಡು ಚಲಿಸಬೇಕು. ಇಲ್ಲದಿದ್ದರೆ ದಂಡ ಕಟ್ಟಬೇಕಾಗುತ್ತದೆ. ಮಾತ್ರವಲ್ಲ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ. ಭಾರತದಲ್ಲಿರುವಂತೆ ರಸ್ತೆಯ ಮೇಲೆ ಯಾವುದೇ ಬೀದಿ ದನಗಳು ಹಾವಳಿ, ಕುದುರೆ, ಸೈಕಲ್, ತಳ್ಳುವಗಾಡಿ, ರಸ್ತೆ ಬದಿ ವ್ಯಾಪಾರಿಗಳು, ಬೀದಿ ನಾಯಿಗಳು ಅಲ್ಲಿ ಇಲ್ಲವೆ ಇಲ್ಲ. ಜನರು ರಸ್ತೆಯಲ್ಲಿ ತಿರುಗಾಡುವುದೇ ಅಪರಾಧವಾಗಿದೆ. ಎಲ್ಲಾ ಕಟ್ಟುಪಾಡುಗಳಿದ್ದರು ಅಮೇರಿಕಾದ ಜನರು ರಸ್ತೆಯ ನಿಯಮಗಳನ್ನ ಚಾಚು ತಪ್ಪದೇ ಪಾಲಿಸುತ್ತಿದ್ದಾರೆ. ಮತ್ತು ಅತೀ ವೇಗವಾಗಿ ವಾಹನ ಚಾಲನೆ ಮಾಡುವವರ ಮೇಲೆ ನಿಗಾ ಇಡಲು ಹೆಲಿಕಾಪ್ಟರ್ ಗಸ್ತು ವಿಶೇಷವಾಗಿದ್ದು, ವೈಜ್ಞಾನಿಕತೆಯಿಂದ ಕೂಡಿದೆ. ಆದ್ದರಿಂದಲೇ ಅಮೇರಿಕಾದ ರಸ್ತೆಗಳಲ್ಲಿ ಯಾವುದೇ ಅಪಘಾತ ಸಂಭವಿಸುವುದಿಲ್ಲ.

ದೇಜಗೌ ರವರು ಅಮೇರಿಕಾ ಪ್ರವಾಸದ ಸಂಧರ್ಭದಲ್ಲಿ ಜಾರ್ಜಿಯಾದ ಪರ್ವತ ಏಕಶಿಲಾಪರ್ವತದ ಸ್ಮಾರಕವನ್ನು ಅಲ್ಲಿರುವ ಕಲೆಯನ್ನು ಅಸ್ವಾದಿಸಿ ಮೈರೋಮಾಂಚನವಾದುದನ್ನು ತಮ್ಮ ಕಥನದಲ್ಲಿ ದಾಖಲಿಸಿದ್ದಾರೆ.

ಏಕಶಿಲಾಪರ್ವತ ಅಂಟ್ಲಾಂಟದಿಂದ ಪೂರ್ವಕ್ಕೆ ಹದಿನಾರು ಮೈಲಿ ದೂರದಲ್ಲದೆ. ಇದು ಉತ್ತರ ಅಮೇರಿಕಾದಲ್ಲಿಯೇ ಅತ್ಯಂತ ದೊಡ್ಡದಾದ ಸೃಷ್ಟಿಯ ವೈಭವದ ಮತ್ತೊಂದು ಮುಖದಂತೆ ಕಂಗೊಳಿಸುತ್ತದೆ. ಈ ಬಟ್ಟ ೩೦೦ ಮಿಲಿವರ್ಷಗಳ ಹಿಂದೆ ಆಕಾರವನ್ನು ತಾಳಿದ್ದು, ಸಮುದ್ರ ಮಟ್ಟದಿಂದ ೧೬೮೩ ಅಡಿ ಎತ್ತರದಲ್ಲಿದೆ. ಸುತ್ತಮುತ್ತಲ ನೆಲದಿಮದ ೮೨೫ ಅಡಿ ಎತ್ತರ, ಮತ್ತು ೫೮೩ ಎಕರೆ ವಿಸ್ತಾರವಾಗಿದೆ. ಈ ಶಿಲೆ ಒಂದು ಸುತ್ತು ಬರಲು ಐದು ಮೈಲಿ ಐದು ಫರ್ಲಾಂಗುಗಳಾಗುತ್ತದೆ. ಇದರ ಸುತ್ತಲು ಹರಡಿರುವ ಜಲರಾಶಿ ಶಿಲೆಯ

ಏಕತನತೆಯನ್ನು ಮುರಿಯುತ್ತಾ, ಅದನ್ನು ನಿತ್ಯಹರಿದ್ವರ್ಣದಿಂದ ಜೀವಂತ-ಗೊಳಿಸುತ್ತಿರುವ ಬನಸಿರಿ ನೋಟಕರ ಕಣ್ಮನ ತಣಿಸುತ್ತವೆ. ಕೆಂಪು ಇಂಡಿಯನ್ನರ ಆರಾಧ್ಯ ದೇವತೆಯಾದ ಇದು ಅವರ ಪಾಲಿಗೆ ಜಡವಸ್ತುವಾಗಿರದೆ ಚೈತನ್ಯದ ಚೈತನ್ಯವಾಗಿ, ಮಾನವನ ಮಹತ್ಕಾಂಕ್ಷೆಗಳ ಸಂಕೇತವಾಗಿದೆ.

ಕುವೆಂಪುರವರು ತಮ್ಮ ಶಿಲಾತಪಸ್ವಿ ಕವನವನ್ನು ಬರೆಯುವಾಗ ಈ ಶಿಲೆಯೇ ಅವರ ಕಲ್ಪನಾಕ್ಷಿಯ ಮುಂದಿದ್ದಂತಿದೆ.

"ಕಲೆಯ ಕಣ್ಣಿರದ ನರರಿಗೆ ನಾನು ಬರಿ ಕಲ್ಲು,
ಕವಿಯನುಳಿದಾರಿಗೂ ಕೇಳದೆನ್ನೀ ಸೊಲ್ಲು!
ನಾನು ರವಿಯುದಯವನು ನೋಡಿನಲಿಯಲು ಬಲ್ಲೆ ;
ಬನದ ಬೆಟ್ಟದ ನೆತ್ತಿಯಲ್ಲಿ ತಿಂಗಳೂನಿಲ್ಲೆ,
ಹುಣ್ಣಿಮೆಯ ತಿಳಿಬಾನು ಬೆಳ್ದಿಂಗಳನು ಚೆಲ್ಲೆ,
ಭಾವದಲೆಗಳು ನನ್ನ ರಕ್ತನಾಳಗಳಲ್ಲಿ,
ಮೊರೆಯುವವು ಸೌಂದರ್ಯದಾನಂದಭರದಲ್ಲಿ!
ನಿನ್ನಂತೆಯೇ ನಾನು ಕೋಗಿಲೆಯ ದನಿಗೇಳಿ
ಮುದುವ ತಾಳಲು ಬಲ್ಲೆ ; ಬೀಸಿಬರೆ ತಂಗಾಳಿ
ಮೈಯೊಡ್ಡಿ ಬೇಗೆಯನು ಪರಿಹರಿಸಿಕೊಳ್ಳಬಲ್ಲೆ!
ಈ ವಿಶ್ವವೆಲ್ಲವನು ನಿನ್ನಂತೆ ನಿಂತಲ್ಲೆ
ಕಲ್ಪನೆಯ ತೆಕ್ಕೆಯಲೆ ತಬ್ಬಿ ಸಾಯಲು ಬಲ್ಲೆ!
ಆದರೂ ನನಗಿನ್ನೂ ನಿನ್ನಿರವು ಬಂದಿಲ್ಲ
ಅದಕಾಗಿ ತಪ್ಪವಗೈಯುತ್ತಿಹೆನು"[೬]

ಈ ಶಿಲಾ ಯೋಗಿ ಕುವೆಂಪು ಅವರನ್ನು ಹತ್ತಿರ ಕರೆದು ಮಾತಾಡಿಸಿದಂತಿದೆ. ಈ ಕಾವ್ಯಭಾಗ ಎಂದು ತಮ್ಮಗಾದ ಅನುಭವವನ್ನು ದೇಜಗೌ ತಿಳಿಸಿದ್ದಾರೆ.

ಈ ಮಹಾಶಿಲ್ಪದಲ್ಲಿ ಅಮೇರಿಕಾದ ಯುದ್ದದಲ್ಲಿ ಮಡಿದ ಮೂರು ಮಹನೀಯರ ಮೂರ್ತಿಗಳಿವೆ. ಜಫರ್ಸನ್ ಡೇವಿಸ್, ರಾಬರ್ಟ್ ಎಡ್ವರ್ಡ್‌ಲೀ, ಥಾಮಸ್ ಜೊನಾಥನ್ ಜ್ಯಾಕ್ಸನ್ ಇವರಲ್ಲಿ ದೇಶಾಭಿಮಾನವನ್ನು ಮನಗೊಂಡು ಅವರಿಗೆ ಈ ಸ್ಮಾರಕ ನಿರ್ಮಿಸಲಾಗಿದೆ. ಈ ಶಿಲಾಮೂರ್ತಿಗಳನ್ನು ಗತ್‌ಜನ್ ಬೋರ್‌ಗ್ಲಮ್ ಎಂಬ ಶಿಲ್ಪಿಯಿಂದ ಪ್ರಾರಂಬವಾಗಿ ವಾಕರ್ ಕೀರ್ತ್‌ಲ್ಯಾಂಡ್ ನಿಂದ ಅಂತಿಮ ರೂಪ ಪಡೆದಿದೆ. ಈ ಶಿಲಾಪರ್ವತಕ್ಕೆ ಹೋಲಿಕೆಯಾದ ಮಾಹಾಶಿಲ್ಪಗಳೆಂದರೆ ಚೀನಾದ ಮಿನ್ ನದಿದಂಡೆ ಮೇಲಿರುವ ಬುದ್ದನಾ ಮಹಾವಿಗ್ರಹಗಳು ಎಂಬುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ತಿಸಿದ್ದಾರೆ. ನಮ್ಮ ಕನಾಟಕದಲ್ಲಿರುವ ಗೋಮ್ಮಟೇಶ್ವರ ಮೂರ್ತಿಯನ್ನು ಆ ಸಂದರ್ಭದಲ್ಲಿ ನೆನೆಯುವುದನ್ನು ಮರೆತ್ತಿಲ್ಲ.

ಶಿಲಾಪರ್ವತಕ್ಕೆಂತಲೂ ದೊಡ್ಡದಾದ, ಅಷ್ಟೆ ಆಕರ್ಷಣಿಯವಾದ ಶಿಲಾಸ್ಮಾರಕ ದಕ್ಷಿಣದಕೋಟಾದ ಶೈಲದಲ್ಲಿದೆ. ಅಮೆರಿಕಾದ ಅಧ್ಯಕ್ಷರಾದ ಜಾರ್ಜವಾಷಿಂಗಟನ್, ಥಾಮಸ್ ಜಫರ್ಸನ್, ಥಯೋಡರ್ ರೂಸ್‌ವೆಲ್ಟ್, ಅಬ್ರಹಾಂ ಲಿಂಕನ್ ಪ್ರತಿಮೆಗಳು ಅಮೆರಿಕಾದ ನೈತಿಕ ರಕ್ಷೆಯಾಗಿ ರಾರಾಜಿಸುತ್ತಿವೆ.

ದೇಜಗೌರವರು ಅಮೆರಿಕಾದ ರೆಚ್ಚೆಸ್ಟಾರ್‌ನಲ್ಲಿರುವ ನಯಗಾರ್‌ಜಲಪಾತವನ್ನು ನೋಡಿ ಅಲ್ಲಿ ಕಂಡ ಸೌಂದರ್ಯವನ್ನು ಕಣ್ಣಿಗೆ ಕಟ್ಟವಂತೆ ವರ್ಣಿಸಿದ್ದಾರೆ. ಆಕರ್ಷಕವಾದ ನಯಾಗಾರ ಜಲಪಾತವನ್ನು ಕಂಡ ಲೇಖಕರಿಗೆ ಅದೊಂದು ಸಂಕ್ಷಿಪ್ತ ಜಗತ್ತಿನಂತೆ ಕಂಡು ಬರುತ್ತದೆ. ಅಲ್ಲಿ ಪ್ರಪಂಚದ ಎಲ್ಲಾ ರಾಷ್ಟ್ರದ, ಎಲ್ಲಾ ಜನಾಂಗದ ಜನರನ್ನು ನೋಡಬಹುದು. ಅವನ್ನು ಸರ್ವ ಜನಾಂಗದ ವಸ್ತುಪ್ರದರ್ಶನದ ಶಾಲೆಯೆಂದು ವರ್ಣಿಸಿದ್ದಾರೆ. ಅಲ್ಲಿಯೂ ನಮ್ಮ ನಾಡಿನ ಜೋಗದ ಸಿರಿಯನ್ನ ನೆನೆದು ನಯಾಗಾರ ಜಲಪಾತಕ್ಕೆ ಹೋಲಿಸಿ ವರ್ಣಿಸುತ್ತಾರೆ. ನಯಾಗಾರ ಸೌಂದರ್ಯದ ಕಡಲಿನಂತ್ತಿದ್ದರೆ ಜೋಗ ರೌದ್ರಸೌಂದರ್ಯಗಳ ಸಂಗಮದಂತಿದೆ ಎಂದು ಕುವೆಂಪುರವರ 'ಜೋಗ' ಎಂಬ ಕವನದ ಸಾಲುಗಳನ್ನು ಉಲ್ಲೇಖಿಸುತ್ತಾರೆ.

"ಸೌಂದರ್ಯ

ಎಂದಿರದನು ಕರೆಯುವೆನೆ ಬಹು ಭಯಂಕರವಾಗಿ
ತೋರುತ್ತದೆ ರೌದ್ರವೆಂದೊರೆವೆನೆ ಕಣ್ಣಳಿಗೆ
ಮಳೆಬಿಲ್ಲಿನಿಂಪುತನ ತೋರುತ್ತದೆ"[೭]

ಎಂದು ಹೇಳಿ ನಯಾಗಾರದಲ್ಲಿ ತೋರುವುದು ಇಂಪುತನ ಎಂದು ವರ್ಣಿಸಿದ್ದಾರೆ.

ಸ್ವಾಮಿ ವಿವೇಕಾನಂದರು ತಮ್ಮ ಐದು ನಿಮಿಷರ ಮಧುರ ಕಂಠದಿಂದ ಇಡೀ ಜಗತ್ತಿನ ಗಮನಸೆಳೆದ ಚಿಕಾಗೋ ನಗರವನ್ನು ನೋಡು ಹಂಬಲದಿಂದ ಹೋಗುತ್ತಾರೆ. ಅವರು ನಡೆದ ಭೂಮಿಯಲ್ಲಿ ನಡೆದಾಡಬೇಕು, ಅವರು ಕುಡಿದ ಇಲ್ಲಿನ ಗಾಳಿಯನ್ನು ಕುಡಿಯಬೇಕು ಎಂದು ಕೊಳ್ಳುತ್ತಾ ದಿನಾಂಕ ೧೧.೦೯.೧೮೯೩ ರಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನ ಸಮಾವೇಶಗೊಂಡಿದ್ದ ಕೊಲಂಬಸ್ ಸಭಾಂಗಣವನ್ನು ಪ್ರವೇಸಿಸಿ ಭಾರಕ್ಕೆ ಗೌರವ ತಂದು ಕೊಟ್ಟ ಮಹಾತ್ಮನಿ ಕೃತಜ್ಞತೆ ಸಲ್ಲಿಸಿದ್ದಾರೆ.

"ವಿವೇಕಾನಂದರ ದೇಹ ಭೂಮಿಗಳಿದಿದ್ದು ಕಲ್ಕತ್ತೆಯಾದರೂ, ಅವರ ಮಹಿಮಾಜ್ಯೋತಿಯ ಜಾಗತಿಕ ಯಾತ್ರೆ ಪ್ರಾರಂಭವಾದದ್ದು ಕೊಲಂಬಸ್ ಸಭಾಂಗಣದಿಂದ ಎಂದರೆ ಅತಿಶಯೋಕ್ತಿಯಾಗಲಾರದು. ಕೊಲಂಬಸ್ ಭೌತಿಕ ಅಮೆರಿಕೆಯನ್ನು ಕಂಡುಹಿಡಿದರೆ, ಆಧ್ಯಾತ್ಮಿಕ ಅಮೆರಿಕೆಯನ್ನು ಕಂಡು ಹಿಡಿದ ಕೀರ್ತಿ ವಿವೇಕನಂದರಿಗೆ ಸಲ್ಲುತ್ತದೆ" ಎಂದು ತಿಳಿಸಿದ್ದಾರೆ."[೮]

ದೇಜಗೌರವರು ತಮ್ಮ ಪ್ರವಾಸದ ಸಂದರ್ಭದಲ್ಲಿ ಅಮೆರಿಕಾದ ರಾಜಧಾನಿ ವಾಷಿಂಗಟನ್‌ನಿಂದ ಐದು ಸಾವಿರ ಮೈಲಿ ದೂರದಲ್ಲಿರುವ ಫೆಸಿಫಿಕ್ ಸಾಗರ ಮಧ್ಯದ ಹವಾಯಿ ದ್ವೀಪ ಸಮೂಹವನ್ನು ಅಲ್ಲಿನ ಸೌಂದರ್ಯವನ್ನು, ಅದು ಸೃಷ್ಟಿಯಾದ ಬಗ್ಗೆಯನ್ನು, ಅದರ ಇತಿಹಾಸವನ್ನು, ಪರಕೀರ ದಾಸ್ಯದಿಂದ ನರಳಿದ ಅಲ್ಲಿನ ಜನರ ದುರಂತಗಳನ್ನು ವಿವರಿಸಿದ್ದಾರೆ. ಫೆಸಿಫಿಕ್ ಸಾಗರದಲ್ಲಿರುವ ಒಟ್ಟು ೧೨೪ ದ್ವೀಪ ಸಮೂಹದಲ್ಲಿ ಹವಾಯಿ ದ್ವೀಪ ದೊಡ್ಡದಾಗಿದ್ದು ಸಮುದ್ರ ಮಟ್ಟಡದಿಂದ ೧೩,೭೭೭,ಅಡಿ ಎತ್ತರ, ಸಾಗರ ತಳದಿಂದ ೩೧, ೭೦೦ ಅಡಿ ಎತ್ತರ ಮತ್ತು ೬೪೨೫ ಚದರ ಮೈಲಿ ವಿಸ್ತೀರ್ಣವನ್ನು ಒಳಗೊಂಡಿದೆ. ಇದು ಜ್ವಾಲಾಮುಖಿ ತವರಾಗಿದ್ದು, ಬುಡಕಟ್ಟು ಜನಾಂಗಗಳ ಹೊಡೆದಾಟ ಕಚ್ಚಾಟಗಳ ಇತಿಹಾಸವನ್ನು ಹೊಂದಿರುವ ಈ ದ್ವೀಪ ಸಮೂಹ ೧೯೫೯ ರಲ್ಲಿ ಅಮೆರಿಕಾ ಸಂಯುಕ್ತ ಸಂಸ್ಥಾನದ ೫೦ ನೇ ರಾಜ್ಯವಾಗಿ ವಿಲೀನಗೊಂಡಿದೆ.

ದೇಜಗೌರವರು ಅಮೆರಿಕಾದ ಯಾವ ಸ್ಥಳಿಗಳಿಗೆ ಹೊದರು ಭಾರತದಿಂದ ಬಂದ ಭಾರತ ಕುಟುಂಬಗಳನ್ನು ಭೇಟಿ ಮಾಡಿ ಅವರ ಕುಶಲ ಕ್ಷೇಮವನ್ನು

ವಿಚಾರಿಸುತ್ತಾರೆ. ಅವರಿಗೆ ಹತ್ತಾರು ಪ್ರಶ್ನೆಗಳನ್ನು ಹಾಕಿ ಅಮೆರಿಕಾದ ಬಗ್ಗೆ ತಿಳಿಯಲು ಪ್ರಯತ್ನಿಸಿದ್ದಾರೆ. ಅಲ್ಲದೆ ಎಷ್ಟೋ ಬಾರಿ ಅವರೊಂದಿ ವಾಗ್ವಾದಕ್ಕೂ ಇಳಿಯುತ್ತಾರೆ. ಅವರು ಅಮೆರಿಕಾಕ್ಕೆ ಬಂದ ಪರಿ ಅವರ ವೃತ್ತಿ, ಎಲ್ಲಾಬಗ್ಗೆಗಳಿಂದ ತಿಳಿಯುವ ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಅಮೆರಿಕಾದಲ್ಲಿ ತಮ್ಮ ಮಗಳು, ಅಳಿಯ ಮತ್ತು ಮೊಮಕ್ಕಳ ಜೋತೆ ಹಲವಾರು ಸ್ಥಳಗಳಿ ಭೇಟಿ ನೀಡಿ ಸಂತೋಷ ಪಟ್ಟಿದ್ದಾರೆ ಅಮೆರಿಕಾದಲ್ಲಿರುವ ಭಾರದ ತಿಂಡಿತಿನಿಸು, ಆಹಾರವನ್ನು ಸವಿದ್ದಿದ್ದಾರೆ. ಹಲವು ದೇವಾಲಯಗಳನ್ನು ದರ್ಶನ ಮಾಡಿದ್ದಾರೆ. ಭಾರದ ಸಂಸ್ಕೃತಿಯನ್ನು ದೂರ ದೇಶದಲ್ಲಿ ಪ್ರಚಾರ ಮಾಡುತ್ತಿರುವ ಬಗ್ಗೆ ಹಿಗ್ಗೆದ್ದಾರೆ.

ವಿದೇಶದಲ್ಲಿ ನೆಲೆಸಿರುವ ಕನ್ನಡಗರು ಕನ್ನಡ ವಾರ್ಷಿಕ ಉತ್ಸವದಲ್ಲಿ ದೇಜಗೌರವರನ್ನು ಆಹ್ವಾನಿಸಿ ಅಲ್ಲೊಂದು ಕನ್ನಡನಾಡನ್ನು ಸೃಷಿಸಿದ ಬಗ್ಗೆಯನ್ನು ಸ್ಮರಿಸುತ್ತಾ ಅಮೆರಿಕಾ ಪರಕೀಯವೆಂದು ತೋರುತ್ತಿಲ್ಲ ನನ್ನವರಿರುವ, ನಮ್ಮ ಸಂಸ್ಕೃತಿ ಮೆರೆಯುವ ನಾಡು ನನ್ನದೇ ಆಗುತ್ತದೆ ಎಂದು ಕನ್ನಡ ಬಂಧುಗಳಿಗೆ ಅವರು ವರ್ಷಿಸಿದ ಪ್ರೀತ್ಸುತ್ಸಾಹಕ್ಕೆ ಎದೆ ತುಂಬಿ ಪ್ರಣಾಮಗಳನ್ನು ಸಲ್ಲಿಸಿದ್ದಾರೆ.

ವಿದೇಶದಲ್ಲಿ ನಿವಾಸಿಗಳಾಗಿರುವ ಕನ್ನಡಿಗರನ್ನು ಕುರಿತೇ ಕುವೆಂಪುರವರು ರಚಿಸಿರು 'ಮೆಟ್ಟುವ ನೆಲ ಕರ್ನಾಟಕ.' ಕವಿತೆಯನ್ನು ನೆನೆಯುತ್ತಾರೆ.

"ನಿ ಮುಟ್ಟುವ ನೆಲ – ಅದೆ ಕರ್ನಾಟಕ
ನೀನೇರುವ ಮಲೆ – ಸಹ್ಯಾದ್ರಿ
ನೀ ಮುಟ್ಟುವ ಮರ – ಗಂಧದ ಮರ
ನೀ ಕುಡಿಯುವ ನೀರ್ – ಕಾವೇರಿ"

ಕನ್ನಡತನವೊಂದಿದ್ದರೆ, ಪೋಟೊಮಾಕ್ನದಿ ಕಾವೇರಿಯಾಗುತ್ತದೆ. ಅಪಲೇಚಿಯನ್ ಪರ್ವತ ಸಹ್ಯಾದ್ರಿಯಾಗುತ್ತದೆ. ನೀ ಮುಟ್ಟುವ ಓಕ್ ಮರವು ಶ್ರೀ ಗಂಧದ ಮರವಾಗುತ್ತದೆ ಇಲ್ಲಿ ವ್ಯಕ್ತವಾಗುವುದು ಸಂಕುಚಿತ ಮನೋಭಾವನೆಯಲ್ಲ ಎಲ್ಲವೂ ಒಂದೇ ಎನ್ನುವ; ಮಿಸಿಸಿಪಿಯಲ್ಲಿಯೂ ಕಾವೇರಿಯನ್ನು ಕಾಣುವ ಅದ್ವೈತ ಭಾವನೆ. ಅಮೆರಿಕಾ ಸಂಸ್ಕೃತಿಯನ್ನು ನಿರಾಕರಿಸಬಾರದು ನಿಜ ಅದರ ಜತೆಗೆ ಕರ್ನಾಟಕ

ಸಂಸ್ಕೃತಿಯನ್ನು ಮೇಳವಿಸಿಕೊಂಡಾಗ ನಾವು ಅಮೆರಿಕೆಯ ನೆಲದಲ್ಲಿದ್ದರೂ ನಮ್ಮ ಪಾಲಗೆ ಕನ್ನಡ ನೆಲವಾಗುತ್ತದೆ. ಕನ್ನಡ ಸಂಗೀತವನ್ನು ಕೇಳುವಾಗ, ಭರತನಾಟ್ಯವನ್ನು ನೋಡುವಾಗ ನಾವು ಅಮೆರಿಕೆಯ ನೆಲವನ್ನು ಆ ಕ್ಷನದಲ್ಲಿ ಮರೆತ್ತೇವೆ ನಮ್ಮ ಆತ್ಮ ಕನ್ನಡನಾಡಿನಲ್ಲಿ ಸಂಚರಿಸುತ್ತದೆ. ಕನ್ನಡ ಭಾಷೆ, ಸಂಸ್ಕೃತಿಗಳನ್ನು ಬದುಕಿನಲ್ಲುಳಿಕೊಂಡದ್ದಾರೆ ಸಂಸ್ಕೃತಿ ಹೃದಯಕ್ಕೆ ಸಂಬಂಧಿಸಿದ್ದದು ಅಮೆರಿಕಾ ಪ್ರಜೆಯಾಗಿಯೂ ಕನ್ನಡಿಗರಾಗುಳಿಯಬಹುದು. ಕರ್ನಾಟಕ ಸಂಗೀತ ಕಲಾ ನಿಪುಣನಾದ ದಿ. ಹಿಗಿನ್ಸ್ ನನ್ನ ಪಾಲಿಗೆ ಪೂರ್ಣವಾಗಿ ಕನ್ನಡಿಗನೇ ಆಹುದು ಎಂದು ನಿದರ್ಶನ ನೀಡಿದ್ದಾರೆ.

"ಎಲ್ಲಾದರೂ ಇರು; ಎಂತಾದರೂ ಇರು;
ಎಂದೆದಿಗೂ ನೀ, ಕನ್ನಡವಾಗಿರು"[೧೦]

ಎಂಬ ಕುವೆಂಪುರವರ ಸಂದೇಶವನ್ನು ಯಾವುದೇ ವಿದೇಶದಲ್ಲಿರುವ ಪ್ರತಿಯೊಬ್ಬ ಕನ್ನಡಿಗನೂ ಪಾಲಿಸಬುಹುದು ಎಂದು ತಿಳಿಸಿದ್ದಾರೆ.

## ೧. ಶಿಕ್ಷಣ ಪದ್ಧತಿ

ದೇಜಗೌರವರು ಪ್ರವಾಸ ಸಾಹಿತ್ಯವನ್ನು ಗಮನಿಸಿದರೆ ಅವರು ಎಲ್ಲಾ ಕ್ಷೇತ್ರಗಳ ಬಗ್ಗೆಯೂ ಚರ್ಚಿಸಿದ್ದು, ಅದರಲ್ಲಿಯೂ ಶಿಕ್ಷಣ ಕ್ಷೇತ್ರದ ಬಗ್ಗೆ ಅವರ ಹೆಚ್ಚಿನ ಚಿಂತನೆ ಹರಿದಿರುವುದನ್ನು ಕಾಣಬಹುದು. ಅವರು ಪ್ರವಾಸವನ್ನು ಶೈಕ್ಷಣಿಕವಾಗಿ ಸ್ವೀಕರಿಸುತ್ತಾರೆ. ಯಾವುದೇ ದೇಶಕ್ಕೆ ಭೇಟಿ ನೀಡಿದರು ಅಲ್ಲಿನ ವಿಶ್ವವಿದ್ಯಾನಿಲಯಗಳಿ ಭೇಟಿ ನೀಡುವುದು, ಅಲ್ಲಿನ ವಿದ್ವಾಂಸರೊಂದಿಗೆ ಶೈಕ್ಷಣಿಕ ವಿಚಾರದ ಬಗ್ಗೆ ಚರ್ಚಿಸುವುದು, ಹಲವು ವಿಚಾರಗಳ ಬಗ್ಗೆ ಚರ್ಚಿಸಿ ತಮ್ಮ ಪ್ರವಾಸ ಕಥನಗಳಲ್ಲಿ ದಾಖಲಿಸಿರುವುದನ್ನು ಗುರುತಿಸಬಹುದು. ಅಷ್ಟೇ ಅಲ್ಲಾ ಅಲ್ಲಿನ ಉತ್ತಮ ಅಂಶಗಳನ್ನು ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಕಾರ್ಯಗತಗೊಳಿಸಲು ಪ್ರಯತ್ನಸಿರುವುದು ಮತ್ತು ಕಾರ್ಯಗತಗೊಳಿ ಯಶಸ್ವಿಯಾಗಿರುವುದನ್ನು ನೋಡಬಹುದಾಗಿದೆ.

ಜ್ಞಾನಾಭಿವೃದ್ಧಿಯ ದೃಷ್ಟಿಯಿಂದ ಅನುಭವ ಸಂಪಾಧನೆಯ ಕೋನದಿಂದ ರಾಷ್ಟ್ರ ಪ್ರಗತಿಯ ನಿಮಿತ್ತದಿಂದ ಪ್ರವಾಸ ಅತ್ಯಗತ್ಯ ನಮ್ಮ ಜನ ಪ್ರಪಂಚದ ಮುಂದುವರೆದ ರಾಷ್ಟ್ರಗಳಿಗೆ ಮೇಲಿಂದ ಮೇಲೆ ಹೋಗಬೇಕು ಅಲ್ಲಿನ ವಿದ್ಯಮಾನಗಳನ್ನು ಗ್ರಹಿಸಬೇಕು,

ಅಭಿವೃದ್ಧಿ ಕಾರ್ಯಗಳನ್ನು ಗ್ರಹಿಸಬೇಕು, ಅಲ್ಲಿನ ಪ್ರತಿಭಾವಂತ ತಜ್ಞರೊಡನೆ ವಿಚಾರವಿನಿಮಯ ಮಾಡಬೇಕು, ಸ್ವದೇಶಕ್ಕೆ ಅನುಕೂಲವಾದದ್ದನ್ನ ಕಾರ್ಯರೂಪಕ್ಕೆ ತರಬೇಕು ಎಂಬುದು ದೇಜಗೌರವರ ಅಭಿಮತ ಮಾತ್ರವಲ್ಲ ಅದನ್ನು ಸಾಧಿಸಿ ತೋರಿಸಿದವರು.

ದೇಜಗೌರವರು ಅಮೇರಿಕಾ ಪ್ರವಾಸ ಕಥನವಾದ ವಿಸ್ಮಯಗಳ ನಾಡಿನಲ್ಲಿ ಪ್ರವಾಸ ಗ್ರಂಥದಲ್ಲಿ ಶೈಕ್ಷಣಿಕ ವಿಚಾರಗಳ ಬಗ್ಗೆ ಚರ್ಚಿಸಿದ್ದು, ಭಾರತ ಮತ್ತು ಅಮೇರಿಕಾಗಳ ನಡುವೆ ಶಿಕ್ಷಣ ಪದ್ಧತಿಯಲ್ಲಿ ವ್ಯತ್ಯಾಸಗಳಿರುವುದನ್ನು ಗುರುತಿಸಿದ್ದಾರೆ. ಹಾಗೂ ಈ ಎರಡು ದೇಶಗಳ ಶಿಕ್ಷಣ ಪದ್ಧತಿಯ ಬಗ್ಗೆ ತೌಲನಿಕವಾಗಿ ಅಧ್ಯಾಯನ ಮಾಡಿರುವುದನ್ನು ಕಾಣಬಹುದಾಗಿದೆ.

ಭಾರತ ಮತ್ತು ಅಮೇರಿಕಾ ಶಿಕ್ಷಣ ಹೊಲಿಸಿದಾಗ ಅನೂಕೂಲದ ದೃಷ್ಟಿಯಿಂದ ಅಮೇರಿಕಾದ ಮಕ್ಕಳು ಮುಂದಿದ್ದಾರೆ. ಅವರಿಗೆ ಎಲ್ಲಾ ರೀತಿಯಾ ಸೌಲಭ್ಯಗಳಿದ್ದು ಎಂತಾ ಶಿಕ್ಷಣವನ್ನಾದರೂ ಪಡೆಯಬಹುದು. ಅಲ್ಲಿನ ಶಾಲೆಗಳಲ್ಲಿ ಹಳ್ಳಿ, ಪಟ್ಟಣಗಳೆಂಬ ವ್ಯತ್ಯಾಸಗಳೇನು ಕಂಡು ಬರುವುದಿಲ್ಲ. ಭಾರತ ಹಳ್ಳಿಗಳಿಂದ ಕೂಡಿರುವ ದೇಶ ದೆಹಲಿ, ಮುಂಬೈ, ಚನ್ನೈ, ಬೆಂಗಳೂರು ಇತರೆ ಕೆಲವು ನಗರಗಳನ್ನು ಬಿಟ್ಟರೆ ಗ್ರಾಮಂತರ ಪ್ರದೇಶದಲ್ಲಿ ಶಿಕ್ಷಣ ಪಡೆಯಲು ಅನುಕೂಲಕ್ಕಿಂತ ಅನಾನುಕೂಲಗಳೇ ಹೆಚ್ಚು. ನಗರದಲ್ಲೂ ಕೂಡ ಖಾಸಗಿ, ಸರ್ಕಾರಿ ಶಿಕ್ಷಣ ಸಂಸ್ಥೆಗಳ ನಡುವೆ ಮತ್ತು ಅಲ್ಲಿ ಕಲಿಯುವ ಮಕ್ಕಳ ನಡುವೆ ತುಂಬ ವ್ಯತ್ಯಾಸವಿರುವುದನ್ನು ಗುರುತಿಸಬಹುದಾಗಿದೆ. ಭಾರತದ ನಗರವಾಗಲಿ, ಹಳ್ಳಿಯಾಗಲಿ ಮುಖ್ಯವಾಗಿ ಹಳ್ಳಿಗಳಿಗೆ ಅಮೇರಿಕಾದ ಸೌಲಭ್ಯಗಳು ದೊರಕುವುದೇ ಆದರೆ ಕಲಿಯುವವರಲ್ಲಿ ಕೆಲವರಾದರೂ ಶಿಖರವೇರುತ್ತಿದ್ದರು ಎಂಬುದು ದೇಜಗೌರವರ ಕೊರಗಾಗಿದೆ. ನಮ್ಮ ದೇಶದ ಮಕ್ಕಳು, ಅಮೇರಿಕಾದಲ್ಲಿರುವ ಮಕ್ಕಳಿಗಿಂತ ೫೦ ವರ್ಷ ಹಿಂದಿನ ಶಿಕ್ಷಣವನ್ನ ಇಂದು ಪಡೆಯುತ್ತಿದ್ದು, ಅಮೇರಿಕಾದ ಮಕ್ಕಳು ೫೦ ವರ್ಷ ಮುಂದಿನ ಶಿಕ್ಷಣವನ್ನ ಪ್ರಸ್ತುತ ಪಡೆಯುತ್ತಿರುವುದಾಗಿ ತಿಳಿಸುತ್ತಾರೆ.

ಶಿಕ್ಷಣದಲ್ಲಿ ವಾತಾವರಣ ಮಹತ್ವವನ್ನು ಹೇಳುವ ಲೇಖಕರು “ಅಮೇರಿಕಾದ ಎಲ್ಲಿ ಹೋದರು ವೈಜ್ಞಾನಿಕ ಮತ್ತು ತಾಂತ್ರಿಕ ಅದ್ಭುತಗಳನ್ನ ನೋಡಬಹುದು.

ಬೇಡವೆಂದರು ಆನೇಕ ಸಂಗತಿಗಳು ನಮ್ಮ ಮನಸ್ಸಿನಲ್ಲಿ ಬೇರುರೂತ್ತವೆ. ಇಂಥಹ ವಾತಾವರಣದಲ್ಲಿ ಎಂಥ ದಡ್ಡನು ಬುದ್ಧಿವಂತನಾಗುತ್ತಾನೆ. ಮಹಾ ಮೇಧಾವಿಯಾಗುತ್ತಾನೆ. ಶಿಕ್ಷಣದಲ್ಲಿ ವಾತಾವರಣದ ಪಾತ್ರ ಬಹುಮುಖ್ಯವಾದುದ್ದು. ಶಿಕ್ಷಣದ ಪ್ರಥಮ ಸೋಪಾನ ಹಾಗೂ ಸಾಧನಾವೆಂದರೆ ವಾತಾವರಣ"೧೧ ಎಂದು ತಿಳಿಸಿದ್ದಾರೆ.

ವ್ಯಕ್ತಿ ಮೊದಲು ಓದುವ ವಾತಾವರಣವನ್ನು ಸೃಷ್ಟಿಸಿಕೊಂಡು ನಂತರ ಓದಲು ಪ್ರಾರಂಭಿಸುವುದರಿಂದ ಓದು ಪೂರ್ಣಗೊಳ್ಳುತ್ತದೆ. ಇಲ್ಲದಿದ್ದರೆ ಅಪೂರ್ಣವಾಗುವ ಸಂಭವವುಂಟು. ಭಾರತದಲ್ಲಿ ಕೆಲವು ಮಕ್ಕಳ ತಂದೆತಾಯಿಗಳು ಅವಿದ್ಯಾವಂತರಾಗಿದ್ದು ಮನೆಯಲ್ಲಿ ಶಿಕ್ಷಣದ ವಾತಾವರಣ ಇಲ್ಲದೆ ಮಕ್ಕಳು ನಡೆದುದ್ದೆ ದಾರಿಯಾಗಿ ದಾರಿ ತಪ್ಪುವ ಸಾಧ್ಯತೆಯನ್ನು ಅಲ್ಲೆಗಳಿಯುವಂತ್ತಿಲ್ಲ.

ಅಮೇರಿಕಾದ ಶಾಲೆಗಳಲ್ಲಿಯೂ ಭಾರತದಲ್ಲಿರುವಂತೆ ಶಾಲೆಯಿಂದ ಶಾಲೆಗೆ ಶಿಸ್ತು ಮತ್ತು ಗುಣಮಟ್ಟದಲ್ಲಿ ಕೆಲವೊಂದು ವ್ಯತ್ಯಾಸಗಳನ್ನು ಕಾಣಬಹುದು. ಅಮೇರಿಕಾದಲ್ಲಿರುವ ಎಲ್ಲಾ ತಂದೆತಾಯಿಗಳೂ ಸಹ ತಮ್ಮತಮ್ಮ ಕೆಲಸಗಳಲ್ಲಿ ತೊಡಗುವುದರಿಂದ ಮಕ್ಕಳ ಶಿಕ್ಷಣದಲ್ಲಿ ಮುತುವರ್ಜಿವಹಿಸಿರುವುದಿಲ್ಲ. ಎಲ್ಲಾ ಮಕ್ಕಳು ಶಿಕ್ಷಣ ಪಡೆಯುವ ಸಲುವಾಗಿ ತಮ್ಮ ತಂದೆತಾಯಿಗಳಿಂದ ದೂರ ಇರಬೇಕಾಗುತ್ತದೆ. ಇದು ಭಾರತ ಮತ್ತು ಅಮೇರಿಕಾದ ಶಿಕ್ಷಣದಲ್ಲಿ ಕಾಣುವ ಪ್ರಥಮ ಭಿನ್ನತೆಯಾಗಿದೆ. ಇದಕ್ಕೆ ಪ್ರತಿಕ್ರಿಯಿಸಿರುವ ದೇಜಗೌರವರು

"ಹದಿನಾಲ್ಕರಿಂದ ಹದಿನೆಂಟನೆಯ ವಯಸ್ಸಿನ ಅವಧಿ ಮಕ್ಕಳ ಬದುಕಿನಲ್ಲೊಂದು ಪ್ರಮುಖ ಘಟ್ಟ. ಮುಗುಳುಬಿರಿಯುವ, ಯೌವನಕ್ಕೆ ಕಾಲಿಡುವ ಕಾಲ. ಈ ಕಾಲದಲ್ಲಿ ಮಕ್ಕಳು ತಂದೆ ತಾಯಿಯರೊಡನಿದ್ದರೆ ಅವರ ಭಾವನಾತ್ಮಕ ಹಾಗೂ ನೈತಿಕ ಜೀವನ ಸುಮುಖವಾಗಿ ವಿಕಾಸಹೊಂದಲು ಅನುಕೂಲವಾಗುತ್ತದೆ"೧೨ ತಿಳಿಸುತ್ತಾರೆ.

ಇದರಿಂದ ಅನುಕೂಲ ಮತ್ತು ಅನಾನುಕೂಲಗಳೆರಡು ಉಂಟು. ಚಿಕ್ಕಂದಿನಲ್ಲಯೇ ಮಕ್ಕಳಲ್ಲಿ ಧೈರ್ಯ ಸ್ವಾವಲಂಬನೆ ಸಾಹಸ ಪ್ರವೃತ್ತಿಗಳು ಬೆಳೆಯುವುದು ಅನುಕೂಲವಾದರೆ, ಮಕ್ಕಳು ಮನೆಯಿಂದ ದೂರವಾಗಿ ಅಲ್ಲಿನ

ಸಹವಾಸದಿಂದ ತಂದೆತಾಯಿಯಿಂದಲ್ಲೂ ದೂರವಾಗಬಹುದು. ಅಲ್ಲದೆ ಭಾವನಾತ್ಮಕ ಮತ್ತು ನೈತಿಕ ವಿಕಾಸ ಕುಂಠಿತಗೊಳ್ಳುವುದು ಅನಾನುಕೂಲವಾಗುತ್ತದೆ.

ಅಮೆರಿಕಾದಲ್ಲಿರುವ ಉದಾರ ಶಿಕ್ಷಣ ನೀತಿ ಮೆಚ್ಚುವಂತದಾಗಿದೆ. ಇಲ್ಲಿ ಪ್ರೌಢಶಾಲೆಯ ಅವಧಿ ನಾಲ್ಕು ವರ್ಷವಾಗಿದ್ದು, ಮೂರು ವರ್ಷದಲ್ಲಿ ಮುಗಿಸುವುದಕ್ಕೆ ಅವಕಾಶಗಳಿವೆ. ಎಸ್.ಎಸ್.ಎಲ್.ಸಿ ನಂತರದ ತರಗತಿಗಳಲ್ಲಿ ವಿದ್ಯಾರ್ಥಿ ಬೇಕಾದಾಗ ಸೇರುವ, ಬೆಡವೆಂದಾಗ ಬಿಡುವ, ಬೇರೆಲ್ಲಿಯಾದರೂ ಯಾವುದಾರೂ ವಿಷಯದಲ್ಲಿ ಯಶಸ್ವಿಯಾಗಿ ಅಧ್ಯಾಯನ ನಡೆಸಿದ್ದರೆ ಅವುಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದರಿಂದ ವಿದ್ಯಾರ್ಥಿಯ ಶ್ರಮ ಕಾಲ ಧನ ಪೋಲಾಗದಂತೆ ನೋಡಿಕೊಳ್ಳುವ ಇಲ್ಲಿನ ಶಿಕ್ಷಣ ನೀತಿಯನ್ನು ದೇಜಗೌರವರು ಮೆಚ್ಚಿದಂತಿದೆ. ಆದರೆ ಭಾರತದಲ್ಲಿ ಎಸ್.ಎಸ್.ಎಲ್.ಸಿ ನಂತರ ಶಾಲೆಯನೇ ಬಿಟ್ಟು ವೃತ್ತಿಯೊಂಕ್ಕೆ ಸೇರಿ ಮತ್ತೆ ಶಿಕ್ಷಣ ಪಡೆಯಲು ಮನಸ್ಸನ್ನೇ ಮಾಡದ ಪರಿಸ್ಥಿತಿ ನಿರ್ಮಾಣವಾಗಿದೆ. ಪದವಿ ಪೂರ್ವ, ಪದವಿ, ಮತ್ತು ಉನ್ನತ ಶಿಕ್ಷಣವನ್ನು ಪಡೆಯುವ ರೀತಿ ಸರ್ಕಾರ ಯೋಜನೆಗಳನ್ನು ಜಾರಿಗೆ ತಂದು ಪ್ರೋತ್ಸಾಹ ನೀಡಬೇಕಿದೆ.

ಅಮೆರಿಕಾದಲ್ಲಿ ಹೈಸ್ಕೂಲು, ಪದವಿಯವರೆ ತಮ್ಮ ಮಕ್ಕಳನ್ನ ಆದರ್ಶದಿಂದ ಪೋಷಿಸುವ ತಂದೆತಾಯಿಗಳು ಪದವಿ ಮುಗಿಯಿತೆಂದರೆ ಮಕ್ಕಳ ಶಿಕ್ಷಣದ ಜವಾಬ್ದಾರಿಯಿಂದ ಪರಾಗುತ್ತಾರೆ. ಅನಂತರ ವಿದ್ಯಾರ್ಥಿಗಳೇ ಸಾಮಾನ್ಯವಾಗಿ ದುಡಿದು ತಮ್ಮ ಆದಾಯವನ್ನು ಬರಿಸಿಕೊಳ್ಳುತ್ತಾರೆ. ತಮ್ಮ ಆದಾಯದಿಂದಲೇ ಶಿಕ್ಷಣವನ್ನು ಮುಂದುವರಿಸುತ್ತಾರೆ. ಸರ್ಕಾರ ಶಿಕ್ಷಣಕ್ಕಾಗಿ ಸಾಲ ನೀಡುತ್ತದೆ. ಹೆಚ್ಚು ಮಂದಿ ವೃತ್ತಿ ಶಿಕ್ಷಣವನ್ನು ಪಡೆದು ಉದ್ದೋಗ ಪಡೆಯುತ್ತಾರೆ. ಎಷ್ಟೋ ಹುಡುಗಿಯರು ದುಡಿದು ತಮ್ಮ ಗಂಡಂದಿರನ್ನು ಓದಿಸಿರುವುದನ್ನು ಕಾಣಬಹುದಾಗಿದೆ.

ಅಮೇರಿಕಾದಲ್ಲಿನ ಪ್ರತಿಯೊಂದು ಶಿಕ್ಷಣ ಸಂಸ್ಥೆಗಳು ಶಾಲಾ ಕಾಲೇಜುಗಳಲ್ಲಿ ತನ್ನದೆ ಆದ ಪಠ್ಯಕ್ರಮವನ್ನು ರೂಪಿಸಿಕೊಂಡಿರುತ್ತವೆ. ಪರೀಕ್ಷೆಗಳನ್ನು ನಡಸಿ ಫಲಿತಾಂಶವನ್ನು ಪ್ರಕಟಿಸುವ ಜವಾಬ್ದಾರಿ ಆಯಾಯ ಶಾಲಾ ಕಾಲೇಜುಗಳಿಗೆ ಸೇರಿದ್ದು. ಇಲ್ಲಿ ಅಂಕ ವ್ಯವಸ್ಥೆಯ ಬದಲು ಶ್ರೇಣಿ ವ್ಯವಸ್ಥೆಯನ್ನು ಕಾಣಬಹುದಾಗಿರುತ್ತೆ. ಶ್ರೇಣಿ ವ್ಯವಸ್ಥೆಗಾಗಿ ಶಾಲಾ ಕಾಲೇಜುಗಳಲ್ಲಿ ಯಾವುದೇ ಸ್ಪರ್ಧೆ ಏರ್ಪಡದೆ

ಪ್ರಮಾಣಿಕತೆಯನ್ನು ಅವಲಂಬಿಸಿ ಅಧ್ಯಾಪಾಕರ ಶಿಪಾರಸ್ಸು, ಪಠ್ಯೇತರ ಚುಟುವಟಿಕೆಗಳು ಮತ್ತು ಸಂದರ್ಶನಕ್ಕೆ ಅನುಗುಣವಾಗಿ ವಿವಿಧ ಶ್ರೇಣಿಗಳನ್ನು ನೀಡಲಾಗುತ್ತದೆ.

ಅಮೇರಿಕಾದಲ್ಲಿ ಈ ಎಲ್ಲಾ ಶಿಕ್ಷಣ ನೀತಿಗಳನ್ನು ನೋಡಿದ ಮೇಲೆ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಅಲ್ಲಿ ಡಿಗ್ರಿಗಿಂತ ಅನಿಭವ ಮತ್ತು ಬುದ್ದಿವಂತಿಕೆ ಬೆಲೆ ಹೆಚ್ಚು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಅಮೇರಿಕಾದ ಶಿಕ್ಷಣ ಗುಣಮಟ್ಟ ಹಾಗೂ ಸೌಲಭ್ಯಗಳ ದೃಷ್ಟಿಯಿಂದ ಜಗತ್ತಿನ ಹಲವು ದೇಶದ ವಿದ್ಯಾರ್ಥಿಗಳನ್ನು ಕೈಬೀಸಿ ಕರೆಯುತ್ತಿದೆ. ಇದು ಅವಕಾಶಗಳ ಗಣಿಯಾದರಿಂದ ಅಲ್ಲಿ ಹೋಗಿ ಓದಿ ಅಲ್ಲಿಯೇ ಉದ್ಯೋಗ ಗಿಟ್ಟಿಸಿಕೊಂಡು ಅಲ್ಲಿಯೇ ನೆಲೆಸಿರುವ ವಿವಿಧ ದೇಶದ ಜನರನ್ನು ನಾವಲ್ಲಿ ಕಾಣಬಹುದಾಗಿದೆ. ಜಗತ್ತಿನ ಹಲವು ದೇಶದ ವಿದ್ಯಾರ್ಥಿಗಳು ತಾಂತ್ರಿಕ ಶಿಕ್ಷಣ ಮತ್ತು ವೈದ್ಯಕೀಯ ಶಿಕ್ಷಣವನ್ನು ಪಡೆಯಲು ಹೆಚ್ಚಾಗಿ ಅಮೇರಿಕಾಕ್ಕೆ ತೆರಳುತ್ತಿರುವುದುಂಟು. ಭಾರತವನ್ನು ಬಿಟ್ಟು ಅಮೇರಿಕಾದಲ್ಲಿ ವಾಸಿಸುತ್ತಿರುವವರಲ್ಲಿ ವೈದ್ಯರೇ ಬಹುಪಾಲು.

ದೇಜಗೌರವರು ಭೇಟಿ ಮಾಡುವ ವ್ಯಕ್ತಿಗಳಿಗೆ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳಿ ವೈದ್ಯಕೀಯ ಶಿಕ್ಷಣದ ಬಗ್ಗೆ ಕೆಲವು ಕಾಯಿಲೆಗಳ ಬಗ್ಗೆ ಕೆಲವು ಚಿಕಿತ್ಸೆಗಳ ಬಗ್ಗೆ ಚರ್ಚಿಸುವುದು ಕಂಡು ಬರುತ್ತದೆ.

ಹೆಂಗಸರು ಮಕ್ಕಳಿಗೆ ಹಾಲು ಕಡಿಸದಿದ್ದರೆ ಸ್ತನಗಳಿಗೆ ಬರುವ 'ಅರ್ಬುದವ್ರಣ' ಎಂಬ ಕಾಯಿಲೆಯ ಬಗ್ಗೆ, ಸಿನಿಮಾತಾರೆಯರು, ಶ್ರೀಮಂತ ಶೋಕಿಯ ಜನರು ಸೌಂದರ್ಯಕ್ಕಾಗಿ ಮಾಡುವ 'ಪ್ಲಾಸ್ಟಿಕ್ ಸರ್ಜರಿ'ಯ ಬಗ್ಗೆ, ಅಲೊಪಥಿ, ಆಯುರ್ವೇದ ಯುನಾನಿ, ಮತ್ತು ಹೋಮಿಯೋಪಥಿಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.

ಭಾರತೀಯ ಅಮೇರಿಕಾ ವೈದ್ಯಶಿಕ್ಷಣಗಳ ನಡುವೆ ಅಂತರವನ್ನು ಗುರುತಿಸಿ ಯಾವ ಯಾವ ವಿಷಯದಲ್ಲಿ ಅಂತರಗಳಿವೆ ಎಂಬುದನ್ನು ದಾಖಲಿಸಿದ್ದಾರೆ. ಇಂಡಿಯಾದಲ್ಲಿ ಕಟ್ಟಡ, ಆಸ್ಪತ್ರೆ, ಪ್ರಯೋಗಾಲಯ, ಉಪಕರಣಗಳ ಸಿದ್ದತೆಯಿಲ್ಲದೆಯೇ ವೈದ್ಯ ಕಾಲೇಜು ಸ್ಥಾಪನೆ ಮಾಡುವುದರಿಂದ ಸಮಸೆಗಳೇ ಹೆಚ್ಚಾಗಿರುತ್ತವೆ. ಅಮೇರಿಕಾದ ಕಾಲೇಜುಗಳಲ್ಲಿರುವ ಬೋಧನೋಪಕರಣಗಳ ಆಧುನಿಕ ಯಂತ್ರಗಳು,

ಆಧುನಿಕ ಔಷದಗಳು ಅಲ್ಲದೆ ಸೂಕ್ಷ್ಮಾತಿ ಸೂಕ್ಷ್ಮತರದ ಡಯಾಲಿಸಸ್ ಯಂತ್ರ ಭಾರತದಲ್ಲಿ ನೋಡಲು ಸಾಧ್ಯವಾಗುತ್ತಿಲ್ಲ. ಈ ಎಲ್ಲಾ ಅನುಕೂಲಗಳಿಲ್ಲದ ಕಾರಣ ಪ್ರಧ್ಯಾಪಕರ ಜ್ಞಾನಾನುಭವ ಆಧುನೀಕೃತವಾಗಿಲ್ಲದೆ, ವಿದ್ಯಾರ್ಥಿಗಳು ಅಮೇರಿಕಾದ ವಿದ್ಯಾರ್ಥಿಗಳಿಗಿಂತ ತುಂಬ ಹಿಂದುಳಿದಿದ್ದಾರೆ. ಭಾರತ ಮತ್ತು ಅಮೇರಿಕಾಗಳ ನಡುವೆ ಅಮತರವನ್ನುಂಟು ಮಾಡಿವೆ.

ಹೀಗೆ ದೇಜಗೌರವರ ಪ್ರವಾಸದುದ್ದಕ್ಕೂ ಶಿಕ್ಷಣ ಪರ ಚಿಂತನೆಗಳನ್ನು, ಶಿಕ್ಷಣಪರ ಕಾಳಜಿಯನ್ನು ಕಾಣಬಹುದಾಗಿದೆ.

## ೨. ಧಾರ್ಮಿಕ ಪದ್ಧತಿ

ದೇ.ಜ.ಗೌ ರವರು ಅಮೇರಿಕಾ ಪ್ರವಾಸದ ಸಂದರ್ಭದಲ್ಲಿ ದಾಖಲಿಸಿದ ಅನುಭವದ ಈ ಕಥನದಲ್ಲಿ ಧಾರ್ಮಿಕ ವಿಚಾರಗಳನ್ನು ಪ್ರಸ್ತಾಪಿಸಿರುವುದನ್ನ ಕಾಣುತ್ತವೆ. ಅಮೇರಿಕಾದಲ್ಲಿ ಕೇವಲ ಕ್ರಿಶ್ಚಿಯನ್‌ರು ಮಾತ್ರವಲ್ಲದೆ ಹಿಂದೂ, ಮುಸ್ಲಿಂ, ಸಿಖ್, ಜಪಾನಿಯರು, ಚೀನಿಯರು, ಹೀಗೆ ಎಲ್ಲಾ ಧರ್ಮಿಯರು ನೆಲಿಸಿರುವುದನ್ನ ನೋಡಬಹುದು.

ಧಾರ್ಮಿಕ ವಿಚಾರದಲ್ಲಿ ಅಮೇರಿಕಾದ ಜನರ ಹಿರಿತನ ಮೆಚ್ಚುವಂತಹದ್ದು ಯಹೂದ್ಯರು, ಹಿಂದೂ, ಮುಸ್ಲಿಂ, ಸಿಖ್, ಜಪಾನಿಯರು, ಚೀನಿಯರು, ಬಹುದಿನಗಳಿಂದ ನೆಲೆಸಿದ್ದು, ಅವರು ಆಗಿನಿಂದಲೂ ಸಿನಗಾಗ, ಪಗೋಡ, ಷಿಂಟೋ ದೇವಾಲಯ, ಗುರುದ್ವಾರ, ಮಸೀದಿಗಳನ್ನು ಕಟ್ಟಿಕೊಂಡು ತಮ್ಮತಮ್ಮ ಮತೀಯ ಆಚರಣೆಗಳನ್ನ ನಡೆಸಿಕೊಂಡು ಬಂದಿದ್ದಾರೆ. ರಾಷ್ಟ್ರ ಹಿತಕ್ಕೆ ಅಥವಾ ರಾಷ್ಟ್ರ ವ್ಯವಹಾರಗಳಿಗೆ ದಕ್ಕೆಯಾಗದ ಯಾವ ಚಟುವಟಿಕೆಗೂ ಅವಕಾಶ ಕಲ್ಪಿಸುವ ಗುಣ ಅಮೇರಿಕನ್ನರದ್ದು ಎಂಬುದನ್ನು ಮರೆಯುವ ಆಗಿಲ್ಲ.

ಭಾರತದ ತಿರುಪತಿಯಲ್ಲಿರುವ ವೆಂಕಟೇಶ್ವರನಿಗೆ ಅಮೇರಿಕಾದಲ್ಲಿ ಪಿಟ್ಸಬರ್ಗ ಮತ್ತು ಮಾಲಿಬೂಗಳಲ್ಲಿ ದೇವಾಲಯಗಳಿದ್ದು, ದಿನ ನಿತ್ಯ ಪೂಜೆ ಪುರಸ್ಕಾರ ನಡೆಯುತ್ತದೆ. ಇಲ್ಲಿ ಪುರೋಹಿತರುಂಟು, ಹಿಂದೂಗಳ ಮದುವೆ ಮೊದಲಾದ ಶುಭಕಾರ್ಯಗಳು ನಡೆಯುತ್ತವೆ. ತಿರುಪತಿಯ ದೇವಸ್ಥಾನ ಬೆಟ್ಟಗುಡ್ಡಗಳ ಮಧ್ಯದಲ್ಲಿದ್ದು

ಭಾರತದ ತಿರುಪತಿಯ ವಾತಾವರಣವನ್ನು ಪುನರ್ಸೃಷ್ಟಿಸಲು ಎಲ್ಲಾ ರೀತಿಯ ಪ್ರಯತ್ನಗಳನ್ನು ಮಾಡಲಾಗುತ್ತಿದೆ.

ದೇಜಗೌರವರು ಪುರೋಹಿತಶಾಹಿಗಳು ಸಹ ಭಾರತವನ್ನು ಬಿಟ್ಟು ದೇಶವಿದೇಶಗಳಿಗೆ ಪುರೋಹಿತ ಕೆಲಸವನ್ನು ಅರಸಿ ಹೋಗುತ್ತಾರೆಂಬುದಕ್ಕೆ ಕಾರಣಗಳನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ.

"ಸಂಪ್ರದಾಯ ಜಡವಾಗಿರುವ ಭಾರತದಲ್ಲಿ ಶಾಸ್ತ್ರಾಗಮ ಪುರಾಣಗಳನ್ನು ಜಾತಿವರ್ಣಗಳನ್ನು ಬಂಡವಾಳ ಮಾಡಿಕೊಂಡು ಭಂಡ ಬದುಕು ನಡೆಸುತ್ತಿರುವ ಸಮಾಜದ ನಡುವೆ ಅಂತರ್ಜಾತಿಯ ವಿವಾಹ ಸಹಪಂಕ್ತಿ ಭೋಜನಗಳಂತ ಸಾಮಾಜಿಕ ಸುಧಾರಣೆಗಳು ಸಾಧ್ಯವಿಲ್ಲವೆಂದು ತೋರಿದ್ದರಿಂದ, ಸುಧಾರಣೆಗಾಗಿ ಕೈಹಾಕಿದರೆ ಬದುಕುವ ಭರವಸೆ ಇಲ್ಲದದ್ದರಿಂದ ಇವರು ಭಾರತವನ್ನು ಬಿಟ್ಟು ಸ್ವಾತಂತ್ರ್ಯ, ಸಮಾನತೆಗಳಿಗೆ ಹೆಸರಾದ ಅಮೇರಿಕಾಗೆ ಬಂದು ತಮ್ಮ ವೃತ್ತಿಯನ್ನು ಮುಂದುವರಿಸಿದ್ದಾರೆಂದು. ಅಮೇರಿಕಾದಂತ ದೇಶದ ಭೊಗವಿಲಾಸಿ ಸಮಾಜಕ್ಕೆ ಆಧ್ಯಾತ್ಮ ಮಾರ್ಗವನ್ನು ತೋರಿ, ಇಲ್ಲಿಂದಲ್ಲೇ ಜಗತ್ತಿನ ಅರ್ಥಾತ್ ಭಾರತದ ಧರ್ಮಗ್ಲಾನಿಯನ್ನು ಪರಿಹರಿಸುವ ಇಚ್ಚೆ ಅವರದಾಗಿದೆಯೆಂದು ತೋರುತ್ತದೆ."೧೩ ಎಂದು ಪುರೋಹಿತಶಾಹಿಗಳ ಪರವಾಗಿಯು ನುಡಿದಿರುವುದನ್ನು ಕಾಣಬಹುದಾಗಿದೆ.

ಅಮೇರಿಕಾದಲ್ಲಿರುವ ಪ್ರಮುಖ ಹಿಂದೂ ದೇವಾಲಯಗಳು

೧. ಮೀನಾಕ್ಷಿ ದೇವಾಲಯ – ಹ್ಯೂಸ್ಟನ್ ನಗರ

೨. ಗಣೇಶ ದೇವಾಲಯ – ನ್ಯೂಯಾರ್ಕ ನಗರ

೩. ವಿಶ್ವನಾಥ ದೇವಾಲಯ – ಫ್ಲೀಂಟ್ ನಗರ

೪. ರಾಧಾಕೃಷ್ಣ ದೇವಾಲಯ – ಬರ್ಕ್ಲೀಯ ನಗರ

೫. ವೆಂಕಟೇಶ್ವರ ದೇವಾಲಯ – ಪಿಟ್ಸಬರ್ಗ ಮತ್ತು ಮಾಲಿಬೂ

ಈ ದೇವಾಲಯಗಳಲ್ಲಿ ಎಲ್ಲಾ ರೀತಿಯ ಋತುಮಾನ ಆಚರಣೆಗಳನ್ನು ಆಚರಿಸಲಾಗುತ್ತದೆ. ಅಲ್ಲದೆ ಭಜನೆ, ಕೀರ್ತನೆ, ಪ್ರವಚನ, ಇತರ ಸಂಗೀತಾದಿಕಾರ್ಯಕ್ರಮಗಳು ಹಾಗೂ ಭರತೀಯ ಸಾಂಸ್ಕೃತಿಕ ಚಟುವಟಿಕೆಗಳು

ನಡೆಯುತ್ತವೆ. ಇಲ್ಲಿಗೆ ಭಾರತೀಯರು ಮಾತ್ರವಲ್ಲದೆ ಅಮೇರಿಕನ್ನರು ಸಹ ಎಲ್ಲಾ ಕಾರ್ಯಕ್ರಮಗಳಿಗೆ ಭಾಗವಹಿಸುತ್ತಾರೆ.

ಅಮೇರಿಕಾದ ಪಿಟ್ಸ್‌ಬರ್ಗ ವಿಶ್ವವಿದ್ಯಾನಿಲಯದಲ್ಲಿ ಹಿಂದೂ ಧರ್ಮ ಅಧ್ಯಾಯನ ವಿಭಾಗವಿದ್ದು ಅಧ್ಯಾಯನಕ್ಕೆ ಎಲ್ಲಾ ರೀತಿಯ ಧನ ಸಹಾಯ ನೀಡಲಾಗುತ್ತಿದೆ. ಮತ್ತು ಭಾರತದಿಂದ ಬರುವ ಕಲಾವಿದರನ್ನು, ವಿಸ್ವಾಂಸರನ್ನು ಆಹ್ವಾನಿಸಿ ಧಾರ್ಮಿಕ ಮತ್ತು ಸಾಂಸ್ಕೃತಿಕ ಚರ್ಚೆಗಳನ್ನು ನಡೆಸಲಾಗುತ್ತಿದೆ. ಇಲ್ಲಿ ಕರಿಯ ಬಿಳಿಯ ಜನಾಂಗೀಯ ಸಂಘರ್ಷ ಸೀಮಿತ ರೀತಿಯಲ್ಲಿ ನಡೆದಿರ ಬಹುದೇ ಹೊರತು, ಮತೀಯ ಸಂಘರ್ಷ ಎಂದಿಗೂ ನಡೆದಿದ್ದಲ್ಲ.

ಅಮೇರಿಕನ್ನರು ತಮ್ಮ ಮತವನ್ನು ಮಾತ್ರವಲ್ಲದೆ, ಹಿಂದೂ ಧರ್ಮವನ್ನು ಅಪಾರವಾಗಿ ಗೌರವಿಸುತ್ತಾರೆ. ಪುರಾಣಗಳು, ವೇದಗಳು, ಮಹಾಭಾರತ, ರಾಮಾಯಣಗಳ ಬಗ್ಗೆ ತಿಳಿದುಕೊಳ್ಳುವ ಕುತೂಹಲದ ಜೊತೆಗೆ ಅಪಾರವಾದ ಗೌರವವಿದೆ.

ದೇಜಗೌರವರು ತಮ್ಮ 'ಶೂದ್ರನಾನು' ಎಂಬ ಕವನದಲ್ಲಿ ನಾನು ಹಿಂದೂ ಧರ್ಮದ ಅನುಯಾಯಿ ಮಾತ್ರವಲ್ಲ ಸರ್ವಧರ್ಮಗಳ ಅನುಯಾಯಿ ಎಂದು ತಿಳಿಸುತ್ತಾರೆ.

"ಕ್ರಿಸ್ತಿಸ್ಲಾಂ ಬಸವಧರ್ಮಗಳ
ಪವಿತ್ರ ಸಂಗಮಂ ಮಮ ಹೃದಯ"[೧೪]

ಈ ಕವನದಲ್ಲಿ ಕ್ರಿಸ್ತ, ಇಸ್ಕಾಂ, ಹಿಂದೂ ಧರ್ಮಗಳ ಸಂಗಮದಿಂದ ರೂಪುಗೊಂಡ ಸರ್ವಧರ್ಮೀಯ ನಾನು. ಸೇವೆಗಾಗಿಯೇ ಹುಟ್ಟಿದವನು. ಗುರುಸೇವೆ, ತಂದೆತಾಯಿಸೇವೆ, ಜನಸೇವೆ, ನುಡಿಸೇವೆ, ದೇಶಸೇವೆಗಾಗಿ ನಿರತನಾಗಿರುವ ಶೂದ್ರನಾನು ಎಂದು ಹೇಳುವಂತೆ ಅವರು ಸರ್ವಧರ್ಮಿಯರು. ವಿಶ್ವವೇ ಒಂದು ಕುಟುಂಬ ಎಲ್ಲರು ಅದರ ಸದಸ್ಯರು ಎಂದು ತಿಳಿದಿರುವ ಅಮೇರಿಕಾವು ಸಹ ಸರ್ವಧರ್ಮಿಯ ದೇಶವಾಗಿದೆ.

## ೩. ರಾಜಕೀಯ ವಿಚಾರಗಳು

ದೇಜಗೌರವರು ಪ್ರವಾಸದ ಸಂದರ್ಭದಲ್ಲಿ ನಡೆಯುವ ಮಾತುಕತೆಗಳು, ಚರ್ಚೆಗಳು, ವಾದವಿವಾದಗಳನ್ನು ಗಮನಿಸಿದರೆ ದೇಜಗೌರವರಿಗೆ ರಾಜಕೀಯದ ಬಗ್ಗೆ, ರಾಜಕಾರಣಿಗಳ ಬಗ್ಗೆ ಸ್ವಲ್ಪವೂ ಗೌರವ ಇದ್ದಂತೆ ಕಾಣುತ್ತಿಲ್ಲ, ದೇಜಗೌರವರು ರಾಜಕೀಯ ವಿಚಾರಗಳನ್ನು ಕೇವಲ ಭಾರತ ಮತ್ತು ಅಮೇರಿಕಾಕ್ಕೆ ಮಾತ್ರವಲ್ಲದೆ ಎಲ್ಲಾ ದೇಶಗಳಿಗೂ ಅನ್ವಯವಾಗುವಂತೆ ತಿಳಿಸಿದ್ದಾರೆ.

ರಾಜಕಾರಣಿಗಳು ಎಂದರೆ ಯಾರು ಎಂಬ ಪ್ರಶ್ನೆಗೆ ಕಾಗೆ ಬೆಳ್ಳಗಿದೆಯೆಂದು, ಹಂಸೆ ಕಪ್ಪಗಿದೆಯೆಂದು ಸಾಧಿಸಿ ತೋರಿಸುವವರು, ಈ ಪ್ರಶ್ನೆಯನ್ನೆ ಮರೆಸಿ ಕಕಮಕಹಿಡಿಸುವಂಥ ಉತ್ತರ ಕೊಡಬಲ್ಲವರೆ ರಾಹಕಾರಣಿಗಳು ಎಂದು ಉತ್ತರ ನೀಡಿದ್ದಾರೆ.

ರಾಜಕೀಯ ಎಂದರೆ, ಭ್ರಷ್ಟಾಚಾರ ಕಾಜಕಾರಣಿಗಳೆಂದರೆ ಭ್ರಷ್ಟಾರು ಎನ್ನು ಮಾತಿದೆ. ಇದು ಒಂದು ಎರಡು ದೇಶಗಳಿಗೆ ಮಾತ್ರವಲ್ಲ ವಿಶ್ವದ ಎಲ್ಲಾ ರಾಜಕಾರಣಿಗಳಿಗೂ ಅನ್ವಯಿಸುವಂತದ್ದು. "ಶ್ರೀಮಂತರಿಂದ ಹಣವನ್ನು ಬಡವರಿಂದ ಮತಗಳನ್ನೂ ದೋಚುವ ಕಲೆಗೆ ರಾಜನೀತಿ ಎಂದು ಹೆಸರಿಸಿದ್ದಾರೆ."[೧೫]

ರಾಜಕೀಯದಲ್ಲಿ ಪ್ರಕ್ಷಾಂತರದ ಬಗ್ಗೆ ಕಾರವಾಗಿಯೇ ನುಡಿಯುವ ದೇಜಗೌರವರು ತಮ್ಮ 'ರಾಜಕಾರಣಿ' ಎಂಬ ಮುಕ್ತಕದಲ್ಲಿ ರಾಜಕಾರಣಿಗಳನ್ನು ನಗ್ನಗೊಳಿಸಿದ್ದಾರೆ.

"ತಾಯಿಗ್ಗಂಡಂದಿರು ಪಕ್ಷಾಂತರಿಗಳು
ಕೋಡಿಂ ಕೋಡಿಗೆ ಹಾರುವ ಮರ್ಕಟಗಳು
ತತ್ವವಗಾಳಿಗೆ ತೂರಿದ ಸೈತಾನಿಗಳು
ಹಡೆದಾ ತಾಯಿಯ ಮರೆತ ಈಡಿಪಸ್ ವಂಶಜರು."[೧೬]

ಎಂಬ ಈ ಕವನದಲ್ಲಿ ರಾಜಕಾರಣಿಗಳ ಗೋಸುಂಬೆತನ ಅವರ ವ್ಯಾಪಾರ ಜೀವನವನ್ನು ಚಿತ್ರಿಸಿರುವುದನ್ನು ನೋಡಬಹುದಾಗಿದೆ.

"ಹುಲಿಸಿಂಹಗಳ ನಂಬಬಹುದಯ್ಯ

ರಾಜಕಾರಣಿಗಳ ನಂಬಲಾಗದು ಗುರು
ಹುಲಿಯ ಗವಿಯಿಂದ ಬದುಕಿ ಬರಬಹುದಯ್ಯ
ರಾಜಕಾರಣಿಗಳ ಮನೆಯಿಂದ ಬದುಕಿ ಬರಲಾಗದಯ್ಯ
ರಾಜಕಾರಣಿಗಳ ನಂಬಿ ಕೆಟ್ಟವರುಂಟು
ನಿನ್ನನು ನಂಬಿ ಕೆಟ್ಟವರಿಲ್ಲವಯ್ಯ."[೧೭]

ಇಂದಿನ ರಾಜಕೀಯದ ವ್ಯವಸ್ಥ ಕಲುಷಿತವಾಗಿರುವುದೂ ಮಾತ್ರವಲ್ಲ ಕ್ರೂರವಾಗಿರು-ವುದನ್ನು ಈ ಕವನದಲ್ಲಿ ತಿಳಿಸುತ್ತಾರೆ.

ಭಾರತ ಕೇಂದ್ರ ಸರ್ಕಾರದಲ್ಲಿ ಆರೋಗ್ಯ ಮಂತ್ರಿ ಮಹಾಶಯರೋಬ್ಬರು (ಯಾರೆಂಬುದನ್ನು ಹೆಸರಿಸಿಲ್ಲ) ಅಮೇರಿಕಾದ ಸ್ಯಾನ್‌ಫರ್ಡ್ ವಿಶ್ವವಿದ್ಯಾನಿಯದಲ್ಲಿ ದಿನಾಂಕ ೦೨.೦೫.೧೯೮೦ ರಂದು ಬಾಷಣ ಮಾಡುತ್ತಾ ಭರತ ಖಂಡದಲ್ಲಿ ಸುರಕ್ಷಿತ ನೀರು, ಪುಷ್ಟಿಕರವಾದ ಆಹಾರ, ಆರೋಗ್ಯ ಇಲ್ಲವೆಂದು ಹೇಳಿ ಎಲ್ಲರನ್ನು ನಗಿಸಿ ತಾವು ನಕ್ಕು "ಸರ್ವಾಧಿಕಾರದಿಂದ ಮಾತ್ರ ಭರತ ಖಂಡದ ಸಮಸ್ಯೆಯನ್ನು ಬಗೆಹರಿಸಬಹುದೇನೋ ಎಂದು ನುಡಿದಿದ್ದರಂತೆ."[೧೮]

ಭಾರತದ ಪ್ರಜೆಯಾಗಿ, ಮಂತ್ರಿಯಾಗಿ, ನಾಡಿನ ಧೀಮಂತ ನಾಯಕರಾಗಿ, ಅವರ ಈ ಮಾತು ಅವರನ್ನೆ ಅವಹೇಳನಮಾಡಿದ್ದಂತಿದೆ. ಆದರೆ ಅವರು ತಮ್ಮ ಅಧಿಕಾರವಧಿಯಲ್ಲಿ ಇಂತಹ ಯಾವುದೇ ಸಮಸ್ಯೆಯನ್ನು ಪರಿಹರಿಸುವಲ್ಲಿ ಪ್ರಯತ್ನ ಪಡಲಿಲ್ಲ. ಹೀಗೆ ಭಾರತವನ್ನು ಅಮೇರಿಕಾ ವೇದಿಕೆಯಲ್ಲಿ ಬಯ್ಯಬಹುದೇ ಎಂದು ದುಃಖಿತರಾಗುತ್ತಾರೆ. ಕುವೆಂಪುರವರ ಕವಿತೆಯೊಂದರ ಸಾಲುಗಳನ್ನು ಉದ್ದರಿಸುತ್ತಾರೆ.

"ದೇಶ ನನ್ನದು ನನ್ನದು ನಾಡು
ಎನ್ನದ ಮಾನವನೆದೆಯ ಸುಡುಗಾಡು
ದೂರ ದೇಶಕೆ ಹೋದಾ ಸಮಯದಿ
ತನ್ನ ನಾಡನು ನೆನೆನೆನೆದುಬ್ಬದ
ಮಾನವನಿದ್ದರೆ ಲೋಕದಲಿ,
ತಾವಿಲ್ಲವನಿಗೆ ನಾಕದಲಿ-ವೀರ ನಾಕದಲಿ"[೧೯]

ನಾಲ್ಕು ಗೋಡೆಗಳ ಮಧ್ಯೆ ಆಡಿಕೊಳ್ಳಬಹುದಾದ ನಮ್ಮ ಸಮಸ್ಯೆಗಳನ್ನು, ಮಾತುಗಳನ್ನು ಸಾರ್ವಜನಿಕರ ವೇದಿಕೆಯಲ್ಲಿ ಬಣ್ಣ ಬಳಿದು ವರ್ಣಿಸಬಹುದಿತ್ತೆ ಎಂದು ನಿದರ್ಶನ ನೀಡಿದ್ದಾರೆ. ಇಂತಹ ರಾಜಕಾರಣಿಗಳಿಗಿರುವ ತನಕ ದೇಶಾಭಿಮಾನ, ಭಾಷಾಭಿಮಾನಗಳಂತಹ ಪದಗಳಿಗೆ ಅರ್ಥವೇ ಇಲ್ಲ ಎಂದು ಅವರನ್ನು ಕಠೋರ ಮಾತುಗಳಿಂದಲೇ ಟೀಕಿಸಿದ್ದಾರೆ.

ಹೀಗೆ ದೇಜಗೌರವರು ತಮ್ಮ ಪ್ರವಾಸ ಕತನದಲ್ಲಿ ರಾಜಕಾರಣಿಗಳ ಹೀನ ದೋರಣೆಗಳನ್ನು, ಅವರು ಜನ ಸಾಮಾನ್ಯರಿಗೆ ಮಾಡು ಹೀನ ಕೃತ್ಯಗಳನ್ನು, ಅವರು ಮಾಡುವ ಭ್ರಷ್ಟಾಚಾರಗಳನ್ನು, ಅವರಿಗಿರುವ ಅಧಿಕಾರ ದಾಹವನ್ನು ಎತ್ತಿ ತೋರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅಲ್ಲದೆ ರಾಜಕೀಯದಲ್ಲಿ ಸ್ತ್ರೀಯರಿಗೆ ನೀಡಿರುವ ಅವಕಾಶದಲ್ಲಿ ನಮ್ಮ ದೇಶವೆ ಮೇಲೆಂಬುದನ್ನು ನೆನೆದಿದ್ದಾರೆ.

## ೪. ಬೇಸಾಯ ಮತ್ತು ಹೈನುಗಾರಿಕೆ

ದೇಜಗೌರವರು ಯಾವುದೇ ಪ್ರವಾಸ ಕೈಗೊಂಡರು ಬಿಡುವು ಮಾಡಿಕೊಂಡು ಹಳ್ಳಿಗಳಿಗೆ ಭೇಟಿ ಮಾಡುವುದು, ಅಲ್ಲಿನ ರೈತನ ಬಗ್ಗೆ ಮತ್ತು ಬೇಸಾಯದ ಬಗ್ಗೆ ತಿಳಿಯಲು ಇಚ್ಛಿಸುವವರು. ಭಾರದಲ್ಲಿರುವಂತೆ ಅಮೇರಿಕಾದಲ್ಲೂ ಕೃಷಿ ಪದ್ದತಿ ಇದ್ದು ವೈಜ್ಞಾನಿಕವಾಗಿ, ಆಧುನಿಕ ಯಂತ್ರಗಳನ್ನು ಬಳಸಿ ಮಾಡಲಾಗುತ್ತದೆ. ಅದರಂತೆಯು ಹೈನುಗಾರಿಕೆಯು ಒಂದು ವೃತ್ತಿಯಾಗಿದೆ.

ಮೂರುನೂರು ಎಕರೆಯಿಂದ ಹಿಡಿದು ಸಾವಿರ ಎಕರೆ ಜಮೀನಿರುವ ರೈತರನ್ನು ಅಮೇರಿಕಾದಲ್ಲಿ ನೋಡಬಹುದು. ಇವರು ದೇಶಕ್ಕಾಗಿ ಮಿಗುವಷ್ಟು ಆಹಾರ ಪದಾರ್ಥವನ್ನು ಬೆಳೆಯುತ್ತಾರೆ. ಕೆಲವರು ತಮ್ಮ ಜಮೀನಿನಲ್ಲಿ ಆಹಾರ ಪದಾರ್ಥವನ್ನು ಬೆಳೆಯದೆ ಮರಗಳನ್ನು ಕಾಡಿನ ರೂಪದಲ್ಲಿ ಬೆಳೆಸುತ್ತಾರೆ. ಇದು ಲಾಭದಾಯಕ ಮಾತ್ರವಲ್ಲದೆ ದೇಶಕ್ಕೆ ಕಾಡನ್ನು ಬೆಳೆಸಿಕೊಟ್ಟಂತಾಗುತ್ತದೆ ಎಂಬುದು ಅವರ ಅಭಿಪ್ರಾಯ. ರೈತು ತಮ್ಮ ಜಮೀನಿನಲ್ಲಿ ಗೋಧಿ, ಬಾರ್ಲೆ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ. ರೈತರಿಗೆ ಕಾಡು ಬೆಳೆಯಲು ಮತ್ತು ಆಹಾರ ಪದಾರ್ಥಗಳನ್ನು ಬೆಳೆಯಲು ಸರ್ಕಾರ ಎಲ್ಲಾರೀತಿಯ ಆರ್ಥಿಕ ಸಹಾಯವನ್ನು ಮಾಡುತ್ತದೆ. ಇಲ್ಲಿನ ಕೃಷಿ ವೈಜ್ಞಾನಿಕ ಪದ್ದತಿಯಾಗಿದೆ. ದೇಜಗೌರವರು ರೈತರ ಬಗ್ಗೆ ವ್ಯವಸಾಯದ ಬಗ್ಗೆ ತಿಳಿಯಲು ಕುತೂಹಲದಿಂದ ಹೋಗಿ ನಿರಾಸೆಯಿಂದ ಹಿಂದಿರುಗಿರುವುದನ್ನು ಕಾಣಬಹುದು.

ಅಮೇರಿಕಾದ ಹೈನುಗಾರಿಕೆ ಕೂಡ ವೈಜ್ಞಾನಿಕ ಪದ್ಧತಿಯಾಗಿದ್ದು. ಸುಮಾರು ಮುವತ್ತು ಹಸುಗಳನ್ನು ಒಟ್ಟಿಗೆ ಸಾಕಿದ್ದು ಅವುಗಳ ಜೊತೆಗೆ ಅವುಗಳ ಕರುಗಳು ಇವೆ. ಇಲ್ಲಿ ಕರುಗಳಿಗೆ ಹಸುಗಳ ಮೊಲೆಹಾಲನ್ನು ನೀಡದೆ ತಿಂಡಿಗಳನ್ನು ನೀಡಿ ದಷ್ಟಪುಷ್ಟವಾಗಿ ಬೆಳೆಯುವಂತೆ ನೋಡಿಕೊಂಡಿದ್ದಾರೆ. ಹಸುಗಳಿಗೂ ತಿಂಡಿಗಳನ್ನು ನೀಡುವುದರಿಂದ ದಷ್ಟಪುಷ್ಟವಾಗಿ ಕಾಣುತ್ತವೆ. ಎಲ್ಲಾ ಹಸುಗಳು ಕೊಠಡಿಯಲ್ಲಿ ಬಂದು ನಿಂತ ಮೇಲೆ ಅವು ಕೊಡುವ ಹಾಲಿನ ಪ್ರಮಾಣಕ್ಕನುಗುಣವಾಗಿ ತಿಂಡಿಯನ್ನು ನೀಡಿ, ಹಾಲು ಕರೆಯುವ ಯಂತ್ರದಿಂದ ಹಾಲು ಕರಹ ಮಾಡಿಕೊಳ್ಳಲಾಗುತ್ತದೆ. ಎಲ್ಲಾ ಹಸುಗಳ ಕರಹ ಕೇವಲ ಒಂದು ಗಂಟೆಯಲ್ಲೆ ಮುಗಿದು ಹೋಗುತ್ತದೆ. ನಂತರ ಹಾಲನ್ನು ಡೈರಿಗೆ ಸಾಗಿಸಲಾಗುತ್ತದೆ. ದೇಜಗೌರವರು ಹಸುಗಳ ಯಜಮಾನ ಇಲ್ಲದ ಕಾರಣ ಹೈನುಗಾರಿಕೆಯ ಸಂಪೂರ್ಣ ಮಾಹಿತಿ, ಡೈರಿ ಲಾಭ ನಷ್ಟವನ್ನು ತಿಳಿಯಲಾಗದೆ ನಿರಾಸೆಗೊಂಡಿದ್ದಾರೆ.

## ೫. ಅಮೇರಿಕಾ ಕಂಡ ವಿಶ್ವ ನಾಯಕರು

ದೇಜಗೌರವರು ಅಮೇರಿಕಾ ಪ್ರವಾಸದ ಸಂದರ್ಭದಲ್ಲಿ ಅಲ್ಲಿನ ಗುಲಾಮಿ ಪದ್ಧತಿಗಾಗಿ, ಸ್ವಾತಂತ್ರ‍್ಯಕ್ಕಾಗಿ ಹೋರಾಟ ಮಾಡಿದ ನಾಯಕರ ಬಗ್ಗೆ ತಿಳಿಯುವುದ ಅವರ ತತ್ವ ಆದರ್ಶಗಳನ್ನು ಸಹೃದಯರಿ ತಿಳಿಸುವ ಪ್ರಯತ್ನ ಮಾಡಿದ್ದಾರೆ. ಇವರು ಕಂಡ ಮಹಾನ್ ನಾಯಕರಲ್ಲಿ ಪ್ರಮುಖರೆಂದರೆ

೧. ಅಬ್ರಹಾಂ ಲಿಂಕನ್

೨. ಮಾರ್ಟಿನ್ ಲೂಥರ್ ಕಿಂಗ್

೩. ಥಾಮಸ್ ಜೆಫರಸನ್

೪. ಹೆನ್ರಿ ಡೇವಿಡ್ ಥೋರೋ

'ಜನರಿಂದ, ಜನರಿಗಾಗಿ, ಜನರಿಗೋಸ್ಕರ ನಡೆಸುವ ಸರ್ಕಾರವೇ ಪ್ರಜಾಪ್ರಭುತ್ವ' ಎಂಬ ತತ್ವವನ್ನು ಪ್ರತಿಪಾದಿಸಿದ ಅಬ್ರಹಾಂ ಲಿಂಕನ್ ಅಮೇರಿಕಾ ಕಂಡ ವಿಶ್ವ ನಾಯಕರಲ್ಲಿ ಪ್ರಮುಖರಾದವರು.

ಭಾರತದಲ್ಲಿ ಗಾಂಧೀಜಿಯಂತೆ ಅಮೇರಿಕಾ ತಾರಕ ಶಕ್ತಿಯಾಗಿ ಅವತರಿಸಿದವರು ಅಬ್ರಹಾಂ ಲಿಂಕನ್. ಬಡಕುಟುಂಬದಲ್ಲಿ ಹುಟ್ಟಿ, ಸಮಸ್ಯೆಗಳ ನಡುವೆ ಬೆಳೆದು ಅಮೇರಿಕಾದ ೧೬ ನೇ ಅಧ್ಯಕ್ಷರಾಗಿ ಆಯ್ಕೆಯಾದ ಕಪ್ಪು ವರ್ಣದ ವ್ಯಕ್ತಿ.

"ಜನಾಂಗೀಯ ವಿದ್ವೇಷದಿಂದ ದೇಶದಲ್ಲಿ ಶಾಂತಿ ನೆಲಸದೆಂದು, ಅಶಾಂತಿಯಿಂದ ವ್ಯಷ್ಟಿಗಾಗಲಿ, ಸಮಷ್ಟಿಗಾಗಲಿ ಸುಖವಿಲ್ಲವೆಂದು ಕರಿಯರ ದಾಸ್ಯ ವಿಮೋಚನೆಗಾಗಿ ಪ್ರಯತ್ನಿಸಿದ"[೨೦] ಹಾಗೂ ಲಿಂಕನ್ ಅಧ್ಯಕ್ಷನಾಗಿದ್ದಾಗ ಒಂದು ಕಡೆ ಅಂತರ್ಯುದ್ಧ, ಮತ್ತೊಂದು ಕಡೆ ದಾಸ್ಯ ಈ ಎರಡು ಸಮಸ್ಯೆಗಳನ್ನು ಅಧ್ಯಕ್ಷನಿಗಿರುವ ವಿಶೇಷ ಅಧಿಕಾರವನ್ನು ಚಲಾಯಿಸಿ ವಿಮೋಚನಾ ಘೋಷಣೆಯನ್ನು ಪ್ರಕಟಿಸಿದ ಒಬ್ಬ ಮಹಾನ್ ನಾಯಕ.

"ಎಲ್ಲಾ ರಾಷ್ಟ್ರಗಳಲ್ಲಿ ಶಾಶ್ವತವು, ನ್ಯಾಯವು ಆದ ಶಾಂತಿ ರೂಡಿಸಲು ಬೇಕಾದ ಸರ್ವ ಪ್ರಯತ್ನವನ್ನು ನಡೆಸೋಣ"[೨೧] ಎಂಬ ಲಿಂಕನ್ನನ ಸಂದೇಶ ಎಲ್ಲಾ ಯುಗಗಳಿಗು, ಎಲ್ಲಾ ದೇಶಗಳಿಗು ಅನ್ವಯಿಸುವಂತದೆ ಎಂಬ ಸಂದೇಶವನ್ನು ಇಡೀ ವಿಶ್ವಕ್ಕೆ ಸಾರಿದ ನಾಯಕ.

ಅಪೂರ್ವ, ಪ್ರಮಾಣಿಕನಾಗಿದ್ದ ಲಿಂಕನ್ನನ ಕುರಿತು "ಜೀವನದಲ್ಲೆಂತೊ, ಜೀವನಾಂತರವು, ಜಗದ ಜೀವನಕ್ಕೆ ಸಂಜೀವನ ಶಕ್ತಿಯಾಗಿದೆ ಲಿಂಕನ್ ಚೇತನ"[೨೨] ಎಂಬ ದೇಜಗೌ ರವರ ಮಾತು ಅಕ್ಷರ ಸಹ ಸತ್ಯವಾದದ್ದು.

ಮಾರ್ಟಿನ್ ಲೂಥರ್ ಕಿಂಗ್ ಅಮೇರಿಕಾ ಕಂಡ ಮಹಾನ್ ನಾಯಕರಲ್ಲಿ ಲಿಂಕನ್ ನಂತರ ಸ್ಥಾನದಲ್ಲಿ ಕಂಡು ಬರುವ ಒಬ್ಬ ನಾಯಕ. ಇವರು ಗಾಂಧೀಜಿಯ ಪರೋಕ್ಷ ಶಿಷ್ಯನೆಂದೆ ಪ್ರಸಿದ್ಧಿಯನ್ನು ಪಡೆದುಕೊಂಡಿದ್ದಾರೆ. ಗಾಂಧೀಜಿಯವರ ಅಹಿಂಸಾ ಸೂತ್ರಗಳು ಅವನ ಚಳುವಳಿಯ ಪ್ರಮುಖ ಅಸ್ತ್ರಗಳನ್ನಾಗಿ ಬಳಸಿಕೊಂಡಿರುವುದು ಒಂದು ವಿಶಿಷ್ಟ. ಕರುಣೆ, ಸಹನೆ, ಅಹಿಂಸೆ ಮತ್ತು ಮೃದು ಸ್ವಭಾವದಿಂದ ಮಾತ್ರ ಅತ್ಮಶಕ್ತಿಗೆ ವಿಜಯ ಉಂಟಾಗುತ್ತದೆ ಎಂಬ, ಹಿಂಸೆಯಿಂದ ಹಿಂಸೆ ಹೆಚ್ಚುತ್ತದೆ ಹೊರತು ಶಾಂತಿ ಲಭಿಸುವುದಿಲ್ಲ ಎಂಬ ಗಾಂಧೀಜಿಯವರ ಜೀವನ ಧ್ಯೇಯವನ್ನ ಎತ್ತಿ ಹಿಡಿದು, ಸತ್ಯಾಗ್ರಹ ಬರಿಯ ಸಿದ್ಧಾಂತವಲ್ಲ ಪ್ರಾಯೋಗಿಕ ವಿಜ್ಞಾನವೆಂಬ ಸತ್ಯವನ್ನ ಅಂತರಾಷ್ಟ್ರೀಯಗೊಳಿಸಿದ ಮಹಾನ್ ಚೇತನ.

ಥಾಮಸ್ ಜೆಫರಸನ್ ಅಮೇರಿಕಾ ಕಂಡ ಮಹಾನ್ ಚಿಂತಕ. ಹುಟ್ಟಿನಿಂದಲೇ ಮಾನವರೆಲ್ಲರು ಸಮಾನರು, ಭೂಮಿ ಮೇಲಿರುವ ಎಲ್ಲವು ಎಲ್ಲರಿಗೂ ಸಿಗಬೇಕು ಎಂಬ ಸಮಾನತೆಯ ತತ್ವವನ್ನು ಜಗತ್ತಿಗೆ ಸಾರಿದ ಚಿಂತಕ.

ಸಮಕಾಲೀನ ನಾಯಕರ ಸಮೂಹದಲ್ಲಿ ಮಹಾನ್ ಚಿಂತಕನೆಂದು ಪರಿಗಣನೆಗೊಂಡಿದ್ದ ಥಾಮಸ್ ನ ಚಿಂತನೆಗಳು ಎಲ್ಲಾ ಕಾಲದ ಮತ್ತು ಎಲ್ಲಾ ದೇಶಗಳ ಜನ ಮೇಲಿಂದ ಮೇಲೆ ಮೆಲುಕು ಹಾಕುವಷ್ಟು ಯೋಗ್ಯವಾಗಿದೆ. "ಕಾನೂನು ಹಾಗೂ ರಾಜ್ಯಾಂಗಗಳನ್ನು ಮೇಲಿಂದ ಮೇಲೆ ಬದಲಾಯಿಸಬಾರದದರು, ಮಾನವ ಮತೀಯ ಪ್ರಗತಿಗೆ ಅನುಗುಣವಾಗಿ ವ್ಯವಸ್ಥೆ ಹಾಗೂ ಕಾನೂನುಗಳು ವ್ಯತ್ಯಾಸಗೊಳ್ಳಬೇಕು. ಸಾರ್ವಜನಿಕ ವ್ಯವಹಾರಗಳ ಬಗ್ಗೆ ಜನ ಜಾಗರೂಕರಾಗಿದ್ದರೆ ಶಾಸನ ಸಭೆಗಳು, ನ್ಯಾಯಮೂರ್ತಿಗಳು, ರಾಜ್ಯಪಾಲರು, ಮಂತ್ರಿಗಳು ತೋಳಗಳಾಗುತ್ತಾರೆ."೨೩ ಹಿಂಸ್ರ ಜಂತುಗಳು ಬೇರೆ ಜಾತಿಯ ಜಂತುಗಳನ್ನು ತಿಂದರೆ, ಮನುಷ್ಯ ಸ್ವಜಾತಿಯ ಜನರನ್ನೆ ನುಂಗಿ ನೊಣೆಯುತ್ತಾನೆ ಎಂದು ಮನದಟ್ಟು ಮಾಡಿದ ಚಿಂತನಶೀಲ ವ್ಯಕ್ತಿ.

ಹೆನ್ರಿ ಡೇವಿಡ್ ಥೋರೋ ದೇಜಗೌರವರು ದಾಖಲಿಸಿರುವ ಮತ್ತೊಬ್ಬ ಮಹಾನ್ ವ್ಯಕ್ತಿ ಗುಲಾಮಿ ಪದ್ಧತಿ ಕಟ್ಟಾ ವಿರೋದಿ. ಅಸಹಕಾರ ಚಳುವಳಿ ಅವರ ಪ್ರಮುಖವಾದ ಗ್ರಂಥ. ಮಹಾತ್ಮಗಾಂಧಿಯವರಿಗೆ ಅವರೇ ಸ್ಪೂರ್ತಿದಾಯಕರು ಮತ್ತು ಗಾಂಧಿಜಿಯಂತೆ ಪ್ರಯೋಗಶೀಲರು. ದಾಸ್ಯವನ್ನು ಸಮರ್ಥಿಸಿಕೊಳ್ಳುವ ಮತ್ತು ಅಕ್ರಮಣ ಮನೋಭಾವದಿಂದ ಅನ್ಯ ದೇಶಗಳ ಮೇಲೆ ಯುದ್ದ ಹೂಡುವ ಸರ್ಕಾರಕ್ಕೆ ಬೆಂಬಲ ನೀಡಬಾರದೆಂದು ಘೋಷಿಸಿದ ವ್ಯಕ್ತಿ.

ದೇಜಗೌ ತಮ್ಮ ವಿಸ್ಮಯಗಳ ನಾಡಿನಲ್ಲಿ ಪ್ರವಾಸ ಕಥನದಲ್ಲಿ ಹಲವು ವೈವಿಧ್ಯಮಯ ಅಂಶಗಳನ್ನು ಗುರುತಿಸುತ್ತಾರೆ. ಮುಖ್ಯವಾಗಿ ಅಲ್ಲಿನ ಸಾಂಸ್ಕೃತಿಕ ಅಂಶಗಳು, ಧಾರ್ಮಿಕ ಅಂಶಗಳು, ರಾಜಕಾರಣದ ಅಂಶಗಳು, ಸಾಮಾಜಿಕ ಅಂಶಗಳು, ಮೌಖಿಕ ಅಂಶಗಳು, ಚಾರಿತ್ರೆಯ ಅಂಶಗಳು ಹೀಗೆ ಹತ್ತು ಹಲವು ಅಂಶಗಳನ್ನು, ಅಲ್ಲಿ ನೋಡಿದ, ಕೇಳಿದ ಅಂಶಗಳನ್ನು ನಿಖರವಾದ ದಾಖಲೆಗಳ ಮುಂಖಾಂತರವೇ ನಮಗೆ ಒದಗಿಸುತ್ತಾರೆ.

## ಕೊನೆಟಿಪ್ಪಣಿಗಳು

೧. ಎಂ ವಿಜಯಲಕ್ಷ್ಮೀರವರ – ದೇಜಗೌ ಜೀವನ ಮತ್ತು ಸಾಧನೆ, ಪುಟ– ೩೩೯

೨. ಅದೇ, ಪುಟ– ೩೩೯

೩. ಅದೇ, ಪುಟ– ೩೪೦

೪. ದೇಜಗೌರವರ – ವಿಸ್ಮಯಗಳ ನಾಡಿನಲ್ಲಿ ಪುಟ – ೨೪೫

೫. ಅದೇ, ಪುಟ –೨೪೯

೬. ಅದೇ, ಪುಟ –೨೧೭

೭. ಅದೇ, ಪುಟ –೨೮೪

೮. ಅದೇ, ಪುಟ –೨೮೭

೯. ಅದೇ, ಪುಟ –೨೫೫

೧೦. ಅದೇ, ಪುಟ –೨೫೬

೧೧. ಅದೇ, ಪುಟ –೦೫

೧೨. ಅದೇ, ಪುಟ –೦೫

೧೩. ಅದೇ, ಪುಟ – ೭೩

೧೪. ದೇಜಗೌರವರ ಕಾವ್ಯ ಸಂಕಲನ, ಶೂದ್ರನಾನು (ಕವನ), ವೈದ್ಯವಾರ್ತೆ ಪ್ರಕಾಶನ ಪುಟ –೩೫

೧೫. ದೇಜಗೌರವರ – ವಿಸ್ಮಯಗಳ ನಾಡಿನಲ್ಲಿ ಪುಟ –೩೬

೧೬. ಡಾ॥ ಟಿ ಕೆ ಕೆಂಪೇಗೌಡ ರವರ – ಅನಿಕೇತನದಲೊಂದು ವಿಶ್ವಚೇತನ, ಪುಟ– ೧೭೫

೧೭. ಅದೇ, ಪುಟ –೧೭೫, ೧೭೬

೧೮. ದೇಜಗೌರವರ – ವಿಸ್ಮಯಗಳ ನಾಡಿನಲ್ಲಿ ಪುಟ – ೧೬೭

೧೯. ಅದೇ, ಪುಟ –೧೬೭

೨೦. ಅದೇ, ಪುಟ – ೨೨೭

೨೧. ಅದೇ, ಪುಟ – ೨೨೮

೨೨. ಅದೇ, ಪುಟ – ೨೨೯

೨೩. ಅದೇ, ಪುಟ – ೨೪೨

# ಆ. ನಿಚ್ಚಹಸುರಿನ ನಾಡಿನಲ್ಲಿ.

ಒಂದೇ ಜಗತ್ತಿನ ಮಾಹಾನ್ ದೇಶಗಳನ್ನು ನೋಡಿ ಅವುಗಳ ಇತಿಹಾಸ ಮತ್ತು ಸಾಮಾಜಿಕ ನೆಲೆಬೆಲೆಗಳನ್ನು ಸಮರ್ಥವಾಗಿ ಅರ್ಥೈಸಿರುವ ದೇಜಗೌ ಈ ಕೃತಿಯ ಮೂಲಕ ಪ್ರವಾಸ ಕಥನದ ದಿಗಂತವನ್ನು ಮತ್ತಷ್ಟು ಮಹತ್ವಪೂರ್ಣವಾಗಿ ವಿಸ್ತರಿಸಿದ್ದಾರೆ.

ಇದು ದೇಜಗೌರವರು ಕೈಗೊಂಡ ಸ್ವಿಡ್ಜರ್‌ಲ್ಯಾಂಡಿನ ಪ್ರವಾಸ ಕಥೆ. 1998 ರಲ್ಲಿ ಅಮೇರಿಕಾ ಪ್ರವಾಸದ ಸಂದರ್ಭದಲ್ಲಿ ಸ್ವಿಡ್ಜರ್ಲೆಂಡ್ ಮೂಲಕ ಸಾಗುತ್ತಾರೆ. ಸ್ವಿಡ್ಜರ್ಲೆಂಡ್‌ನಲ್ಲಿ ಡಿಯರಿಂಗ್ ದಂಪತಿಗಳ ಸಹಕಾರದಿಂದ ಆ ನಾಡನ್ನು ಪರಿಪೂರ್ಣವಾಗಿ ನೋಡಿದ. ಕೇಳಿದ. ಅನುಭವಿಸಿದ ಅನುಭವಗಳ ಕಥನವಾಗಿದೆ. ಯೂರೋಪಿನ ಹೃದಯ ಸ್ಥಾನದಲ್ಲಿರುವ ಈ ದೇಶ ಜಗತ್ತಿನ ಅತಿಸುಂದರ ದೇಶಗಳಲ್ಲಿ ಒಂದಾಗಿದ್ದು ಇಲ್ಲಿನ ಭೂಭಾಗ ನಿತ್ಯ ಹಸುರು ಸಿರಿಯನ್ನು ಹೊಂದಿರುವುದು ಸಹಜವಾಗಿರುವುದರಿಂದ ದೇಜಗೌರವರು ಇದನ್ನು ನಿಚ್ಚ ಹಸುರಿನ ನಾಡಿನಲ್ಲಿ ಎಂದು ಔಚಿತ್ಯಪೂರ್ಣವಾಗಿ ಕರೆದಿದ್ದಾರೆ. 'ಕಾಶ್ಮೀರದ ಸೊಬಗನ್ನು ಬಣ್ಣಿಸುವ ಕವಿಗಳು ಅದನ್ನು ಭಾರತದ ಸ್ವಿಡ್ಜರ್ಲೆಂಡ್ ಎಂದು ಕರೆದಿದ್ದಾರೆ. ಈ ಸೌಮ್ಯದಲ್ಲಿ ಭಾರತ ಮತ್ತು ಸ್ವಿಡ್ಜರ್ಲೆಂಡ್‌ಗಳ ಸೌಂದರ್ಯದ ಸಿರಿದಾಣಗಳ ಮಹತ್ವಕ್ಕೆ ಒತ್ತು ಬರುತ್ತದೆ.' ಸ್ವಿಡ್ಜರ್ಲೆಂಡ್‌ಪರ್ವತ ಸ್ತೋಮಗಳ ಬೀಡಾಗಿದ್ದು, ಸರೋವರ, ನದಿ, ನಿರಂತರ ಚಳಿ, ತಂಪು ಹವೆಗಳಿಂದ ಕೂಡಿರುವ ಈ ಕಣಿವೆಗಳ ನಾಡು ವಿಶ್ವವನ್ನು ತನ್ನತ್ತ ಆಕರ್ಷಿಸುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ನಿಚ್ಚ ಹಸುರಿನ ನಾಡಿನಲಿ ತಾಂತ್ರಿಕ ದೃಷ್ಟಿಯಿಂದ ತುಸು ಭಿನ್ನವಾಗಿದೆ. ಶಾಲೆಯ ಮಕ್ಕಳನ್ನು ಸಂಭೋದಿಸಿ ಅವರನ್ನು ಸ್ವಿಡ್ಜರ್‌ಲ್ಯಾಂಡಿನ ಹಲವು ಭಾಗಗಳಿಗೆ ಕೊಂಡೊಯ್ಯುವ ವಿಧಾನಗಳನ್ನು ಬಳಸಿಕೊಂಡಿದ್ದಾರೆ ಗ್ರಂಥಕರ್ತರು. ಸ್ವಿಡ್ಜರ್‌ಲ್ಯಾಂಡ್ ಪ್ರಪಂಚದ ಅತ್ಯಂತ ಸುಂದರವಾದ ಸ್ವಚ್ಚವಾದ ಯುದ್ಧ ಪರಿತ್ಯಕ್ತ ರಾಷ್ಟ್ರ. ನಾಲ್ಕು ಭಾಷೆಗಳಲ್ಲಿ ಹಂಚು ಹೋಗಿರುವ ರಾಷ್ಟ್ರ ಹೇಗೆ ಏಕೋಭಾವದಿಂದ ಪ್ರಗತಿಯನ್ನು ಸಾಧಿಸಿದೆ ಎಂಬುದಕ್ಕೆ ಜೀವಂತ ನಿದರ್ಶನ. ಅಂಥ ದೇಶದ ಸ್ಥಿತಿಗತಿ, ಧ್ಯೇಯೊದ್ದೇಶಗಳನ್ನು ಮಕ್ಕಳಿಗೆ ಪರಿಚಯ ಮಾಡಿಕೊಡಬೇಕೆಂಬುದೇ ದೇಜಗೌ ದೃಷ್ಟಿ.

ಇಲ್ಲಿ ಮಕ್ಕಳನ್ನು ಕುರಿತು ಸಂಭೋಧನೆ ಇದ್ದರೂ ವಯಸ್ಕರಿಗೆ ಪ್ರಯೋಜನ-ವಾಗುತ್ತದೆಂಬುದು ಕೃತಿಕಾರರ ಅಭಿಪ್ರಾಯ.

ಸ್ವಿಜರ್‌ಲ್ಯಾಂಡಿಗೆ ಯಾವಾಗ ಎಲ್ಲಿ ಹೋದರೂ ದೂಳು, ಕಸ ಬಚ್ಚಲುಗಳು ಎಲ್ಲೂ ಕಾಣುವುದಿಲ್ಲ. ಅದಕ್ಕೆ ಮುಖ್ಯವಾದ ಕಾರಣವೇನಂದರೆ ಅಲ್ಲಿ ಮಳೆ ಮತ್ತು ಹಿಮ ಪ್ರತಿ ತಿಂಗಳು ಸುರಿಯುತ್ತವೆ. ಮಳೆಯ ನೀರು ಕಸ ಕೊಚ್ಚೆಗಳನ್ನು ಹೊತ್ತಿಕೊಂಡು ಹೋಗುವುದಲ್ಲದೆ ಎಲ್ಲಾ ಕಡೆಯು ಹಸಿರನ್ನು ಬೆಳೆಸುತ್ತದೆ. ಅಲ್ಲಿ ಎಷ್ಟು ಹಸಿರು ಬಣ್ಣಗಳಿವೆ ಎಂದು ಲೆಕ್ಕ ಹಾಕಲು ಆದಿಶೇಷನಿಗೂ ಸಾಧ್ಯವಿಲ್ಲ. ಮಳೆ, ಮೋಡ, ಮಂಜು, ಹಿಮ ಸರೋವರ, ಜಲಪಾತ, ಗಗನಚುಂಬಿ ಮರಗಳು, ಹಸಿರು ಹಸಲೆ, ಗಡಿಯಾರ, ಚಾಕಲೇಟ್, ಬ್ಯಾಂಕುಗಳು, ಸ್ವಿಜರ್‌ಲ್ಯಾಂಡಿನ ವೈಶಿಷ್ಟಗಳು. ನಮ್ಮಲ್ಲಿಯೂ ಮಲೆನಾಡಿದೆ ನಿಜ ಅಲ್ಲಿ ಕೆಲವು ತಿಂಗಳು ಹಸಿರು ಉಕ್ಕುತ್ತದೆ. ಆದರೆ ಸ್ವಿಜರ್‌ಲ್ಯಾಂಡಿನಲ್ಲಿರುವ ಸರೋವರಗಳು ಸದಾ ಜೀವಂತ ನದಿಗಳು ನಮ್ಮಲ್ಲಿಲ್ಲ.

ಸ್ವಿಜರ್‌ಲ್ಯಾಂಡ್‌ನಲ್ಲಿಯೂ ಕೂಡ ಬುಡಕಟ್ಟು ಜನಾಂಗದವರೆ ಮೂಲನಿವಾಸಿ-ಗಳಾಗಿದ್ದು, ಅಕ್ರಮಣ ಸಂಸ್ಕೃತಿಗೆ ಒಳಗಾಗಿದ್ದಾರೆ. ಇಲ್ಲಿನ ಸಂಯುಕ್ತ ವ್ಯವಸ್ಥೆಗೆ ಅಸ್ತಿಭಾರ ಹಾಕಿದವರು ಮಾತ್ರ ರೈತರೆಂದರೆ ಆಶ್ಚರ್ಯವಾದರೂ ಆದೆ ಸತ್ಯ. ೧೭ ನೇ ಶತಮಾನದ ಪೂರ್ವಭಾಗದಲ್ಲಿ ಯೂರೋಪ್ ತುಂಬ ಆವರಿಸಿಕೊಂಡಿದ್ದ ೩೩ ವರ್ಷಗಳ ಯುದ್ದದಲ್ಲಿ ಸ್ವಿಜರ್‌ಲ್ಯಾಂಡ್ ತಾಟಸ್ಥ್ಯನೀತಿ ಅನುಸರಿಸಿದ್ದು ಇಡೀ ಜಗತ್ತಿನ ಗಮನಸೆಳೆಯಿತ್ತಲ್ಲದೆ, ಆ ನಾಡು ಅಭಿವೃದ್ದಿಯೊಂದಲೂ ಕಾರಣವಾಯಿತ್ತೆನ್ನಬಹುದು.

ಸ್ವಿಜ್ಜರ್ಲೆಂಡ್ ಕರ್ನಾಟಕದ ದೊಡ್ಡದೊಂದು ಜಿಲ್ಲೆಯಷ್ಟು ವಿಸ್ತಾರವಾಗಿರಬಹುದು. ಅಲ್ಲಿ ನಾಲ್ಕು ಭಾಷೆಗಳು ಚಾಲ್ತಿಯಲ್ಲಿವೆ. ದೇಜಗೌ ರವರು ಅಲ್ಲಿನ ಭಾಷಾ ಇಲಾಖೆಗೆ ಹೋಗಿ, ಭಾಷಾ ಸಮನ್ವಯ ನೀತಿಯನ್ನು ಅಧ್ಯಯನ ಮಾಡುತ್ತಾರೆ. ಭಾರತದಂತಹ ದೊಡ್ಡ ರಾಷ್ಟ್ರಕ್ಕೆ ೧೪ ಭಾಷೆಗಳು ಹೆಚ್ಚಲ್ಲ. ಸ್ವಿಜ್ಜರ್ಲೆಂಡಿನ ಮಾದರಿಯಲ್ಲಿ ಭಾಷಾ ನೀತಿಯನ್ನು ರೂಪಿಸಿಕೊಂಡಿದ್ದಾದರೆ ಭಾಷಾ ಸಮಸ್ಯೆ ಇರುವುದಿಲ್ಲ ಎಂಬುದು ಇವರ ಸ್ಪಷ್ಟನೆ.

ದೇಜಗೌರವರು ತಮ್ಮ ಪ್ರವಾಸ ಕಥನದಲ್ಲಿ ಮಾಹಿತಿ ಭೇಟಿಯನ್ನು ಮುಂದುವರಿಸಿ ಸ್ತ್ರೀಪುರುಷರ ಸಮಾನತೆಯನ್ನು ಕರಿತು ತಿಳಿಸಿದ್ದಾರೆ.

ಸ್ವಿಡ್ಜರ್‌ಲ್ಯಾಂಡ್‌ನಲ್ಲಿ ಸ್ತ್ರೀ ಒಬ್ಬಳು ಮತದಾನ ಮಾಡಲು ೧೯೭೧ ವರೆಗೆ ಕಾಯಬೇಕಾಯಿತು. ಅಷ್ಟರಲ್ಲಿ ಭಾರದ ದೇಶದಲ್ಲಿ ಸ್ತ್ರೀ ಒಬ್ಬಳು ದೇಶವನ್ನು ಆಳುತ್ತಿರುವುದನ್ನು ಗಮನಿಸಿ ನಮ್ಮ ದೇಶವೆ ಉತ್ತಮವೆನ್ನಬಹುದು. ಇಂದಿಗೂ ಯೂರೋಪಿನ ಕೆಲವು ರಾಷ್ಟ್ರಗಳಲ್ಲಿ ಸ್ತ್ರೀಯರು ಪುರುಷರ ಸಮಾನತೆಗಾಗಿ ಹೋರಾಡುತ್ತಿರುವುದನ್ನು ಕಾಣಬಹುದಾಗಿದೆ.

## ೧. ಸ್ವಿಡ್ಜರ್‌ಲ್ಯಾಂಡ್ ಮತ್ತು ಭಾರತದ ಸಂಸ್ಕೃತಿ

ದೇಜಗೌರವರು ಪ್ರವಾಸ ಸಂದರ್ಭದಲ್ಲಿ ವಿದೇಶದಲ್ಲಿದ್ದರೂ ಭಾರತೀಯ ಸಂಸ್ಕೃತಿಯನ್ನು ಪ್ರಸಾರ ಮಾಡುತ್ತಿರುವುದನ್ನು ಮತ್ತು ಭಾರತೀಯ ಸಂಸ್ಕೃತಿಯನ್ನು ಮೆಚ್ಚಿ ಪಾಲಿಸುತ್ತಿರುವುದನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ.

ಸ್ವಿಡ್ಜರ್ಲೆಂಡಿನಲ್ಲಿ ಸುಮಾರು ೨೦೦೦ ಭಾರತೀಯ ಕುಟುಂಬಗಳು ವಾಸವಾಗಿದ್ದು, ಕೆಲವರು ಕಂಪನಿಗಳಲ್ಲಿ ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಾರೆ. ಕೆಲವರು ವ್ಯಾಪಾರ ವಾಣಿಜ್ಯಗಳಲ್ಲಿ ನಿರತರಾಗಿದ್ದಾರೆ. ಭಾರತೀಯ ಅಹಾರವನ್ನು ಅಲ್ಲಿಯವರೆಗೂ ಉಣಿಸುವ ಹೋಟೆಲ್‌ಗಳಿವೆ. ಇವೆಲ್ಲಕಿಂತ ಮಿಗಿಲಾಗಿ ಭಾರತೀಯ ಸಂಸ್ಕೃತಿಯನ್ನು ಪ್ರಸಾರ ಮಾಡುವ ಕಲಾಭಿಮಾನಿಗಳಿದ್ದಾರೆ. ಧ್ಯಾನ ಮತ್ತು ಯೋಗವನ್ನು ಕಲಿಸಲಾಗುತ್ತಿದೆ. ಹರೇಕೃಷ್ಣ ಪಂಥವಿದೆ, ಶ್ರೀರಾಮಕೃಷ್ಣ ಆಶ್ರಮವಿದೆ.

ಭಾರತೀಯ ಸಂಸ್ಕೃತಿಯನ್ನು ವಿದೇಶದಲ್ಲಿ ಪ್ರಸಾರ ಮಾಡುತ್ತಿರುವವರಲ್ಲಿ ಮುಖ್ಯರೆಂದರೆ ವಿಜಯರಾವ್, ಮತ್ತು ಕೇಶವ್ ಇವರಿಬ್ಬರೂ ನೃತ್ಯ ಕಲಾವಿದರು ಅಲ್ಲಿಯವರಿಗೆ ಭರತನಾಟ್ಯದಲ್ಲಿ ಅಭಿರುಚಿಯನ್ನು ಮೂಡಿಸಿ ಕಲಿಸುತಿದ್ಧಾರೆ. ಯೋಗಾಸನಗಳನ್ನು ಹೇಳಿಕೊಡುತಿದ್ದಾರೆ. ಮಹತ್ವದ ವಿಷಯವೆಂದರೆ ನಾಟ್ಯ ಕಲಿಯುವಾಗ ಭಾರತೀಯ ಉಡುಪನ್ನೇ ಧರಿಸಬೇಕು ಇದು ವಿಜಯರಾವ್ ವಿಧಿಸಿರುವ ಕಟ್ಟಳೆ. ಅಷ್ಟೆ ಅಲ್ಲ ಅವರಿಗೆ ಕನ್ನಡವನ್ನು ಕಲಿಸುತಿದ್ದಾರೆ. ದೇಜಗೌ ಅಲ್ಲಿಯ ಕಲಾ ಮಂದಿರಗಳಿಗೆ ಭೇಟಿ ಅಲ್ಲಿ ತಾವು ಕಂಡ ಭಾರತೀಯ ಸಂಸ್ಕೃತಿಯನ್ನು ನೋಡಿ ಹಿಗ್ಗಿದ್ದಾರೆ.

ವಿಜಯರಾವ್‌ರವರು ನಟೇಶ್ವರ ಅಕಾಡಮಿಯನ್ನು ಸ್ಥಾಪಿಸಿ ಭಾರತೀಯ ಕಲೆಯ ಕಂಪನ್ನು ಚೆಲ್ಲುತ್ತಿರುವ ಅಭಿಜಾತ ಕಲಾವಿದೆ. ವಿಜಯ ಮೈಸೂರಿನವರು ಅವರ

ಪತಿ ಆನಂದ ಸ್ವಿಡ್ಜರ್ಲೆಂಡಿನವರು. ದೇಜಗೌರವರು ಅವರ ಮನೆಗೆ ಭೇಟಿ ನೀಡಿದಾಗ ಭಾರತೀಯರ ಅದರಲ್ಲೂ ಮೈಸೂರಿನ ರುಚಿಯನ್ನು ವಿದೇಶದಲ್ಲೂ ಕಂಡು ಬೆರಗಾಗುತ್ತಾರೆ. ವಿಜಯಾನಂದರ ಮಗಳು ಶರ್ಮಿಳಾ ಎರಡು ಸಂಸ್ಕೃತಿಗಳ ಸಮ್ಮಿಲನದಂತ್ತಿದ್ದರು. ಇದನ್ನು ನೋಡಿದ ಲೇಖಕರು "ಒಳ್ಳೆಯ ಸಂಸ್ಕೃತಿ ಎಲ್ಲಿದ್ದರು ವಿಶ್ವಕ್ಕೆ ಸೇರಿದ್ದು, ಎಲ್ಲರಿಗೂ ಸೇರಿದ್ದು ಆದರೆ ಒಂದೊಂದು ಸಂಸ್ಕೃತಿಯಲ್ಲಿಯೂ ವಿಶಿಷ್ಟ ಗುಣಗಳಿರುತ್ತವೆ."[೧] ಎಂದು ಹೇಳುತ್ತಾರೆ.

ಕೇಶವ್ ಇರುವ ಊರು ಭಾಸೆಲ್ ಕರ್ನಾಟಕದ ಸಾಹಿತಿಗಳ ದೃಷ್ಟಿಯಲ್ಲಿ ಬಾಸೆಲ್ ಒಂದು ಪವಿತ್ರವಾದ ಯಾತ್ರ ಸ್ಥಳ. ಅಲ್ಲಿ ತಯಾರಾದ ಅನೇಕ ಮಿಷಿನರಿಗಳು ಕರ್ನಾಟಕಕ್ಕೆ ಬಂದು ಹಳಗನ್ನಡ ಗ್ರಂಥಗಳ ಸಂಪಾದನೆಯನ್ನು ಮಾಡಿ ವ್ಯಾಖ್ಯಾನಗಳನ್ನು ಬರೆದು ವಿದ್ವತ್ತಿನ ರೂಪು ರೇಖೆಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಕಿಟೆಲ್, ಗುಂಡರ್ಟ್ ಮೊದಲಾದವರು ಮುಖ್ಯರು. ಹಿಂದಿನ ಕೇರಳದಲಿದ್ದ ಗುಂಡರ್ಟನ ಮೊಮ್ಮಗನೇ ಅರ್ಟನ್‌ಯೇಸ್ ಆತ ದಕ್ಷಿಣ ಇಂಡಿಯಾದಲ್ಲಿ ಅನೇಕ ತಿಂಗಳಿದ್ದ ಅವನು ನೋಬೆಲ್ ಪಾರಿತೋಷಕ ಪುರಸ್ಕೃತನಾದರಿಂದಲೇ ದಕ್ಷಿಣ ಭಾರತೀಯರಿಗೆ ಹೆಮ್ಮೆಯ ವಿಷಯ. ಕೇಶವ್‌ರರು ಬಾಸೆಲ್‌ನಲ್ಲಿ ಕಲಾಶ್ರೀ ಎಂಬ ಸಂಸ್ಥೆಯನ್ನು ಸ್ಥಾಲಿಸಿ ಭರತನಾಟ್ಯವನ್ನು ಕಲಿಸುತ್ತಿದ್ದಾರೆ. ಅಲ್ಲದೆ ರಾಮಾಯಣ, ಮಹಾಭಾರತ, ಬಿದ್ದಚರಿತ, ಶಿವಪಾರ್ವತಿ, ರೂಪಕವನ್ನು ಏಕಪಾತ್ರಭಿನಯದ ಮೂಲಕ ನೃತ್ಯರೂಲಕದ ಮೂಲಕ ಯೂರೋಪಿನಲ್ಲೆಲ್ಲಾ ಜನಪ್ರಿಯಗೊಳಿಸಿ ಭಾರತೀಯ ಸಂಸ್ಕೃತಿಯನ್ನು ಪರಿಚಯ ಮಾಡುತ್ತಿದ್ದಾರೆ.

ಸ್ವಿಡ್ಜರ್ಲೆಂಡಿನಲ್ಲಿರುವ ಭಾರತೀಯರೆಲ್ಲಾ ಹಾಗಾಗ ಒಟ್ಟಿಗೆ ಸೇರುತ್ತಾರೆ. ಯಾವುದೇ ಜಾತಿಭೇದ ಮತವೆನ್ನದೆ ಭಾರತೀಯ ವೇಷಭೂಷಣವನ್ನು ತೋಟ್ಟು ಸಂಭ್ರಮಿಸುತ್ತಾರೆ. ಸಭೆ ಸಮಾರಂಭಗಳನ್ನು ನಡೆಸಿ ಅಲ್ಲಿನ ಜನರಿಗೆ ನಮ್ಮ ಸಂಸ್ಕೃತಿಯನ್ನು, ಅದರ ಇತಿಹಾಸವನ್ನು ತಿಳಿಸುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ಮತ್ತು ತಮ್ಮ ಮಕ್ಕಳಿಗೆ ಭಾರತೀಯ ಸಂಸ್ಕೃತಿಯನ್ನೇ ಕಲಿಸುತ್ತಿರುವುದನ್ನು ಕಾಣಬಹುದಾಗಿದೆ.

ಸ್ವಿಜ್ಜರ್ಲೆಂಡಿನಲ್ಲಿರುವ ರಾಷ್ಟ್ರೀಯ ಗ್ರಂಥಾಲಯಕ್ಕೆ ಭೇಟಿ ನೀಡಿದ ದೇಜಗೌರವರು ಭಾರತ ಮತ್ತು ಸ್ವಿಜ್ಜರ್ಲೆಂಡಿನ ನಡುವಿನ ಸ್ನೇಹ ಸಂಬಂದವನ್ನು ೧೯೫೨ ಹಿಂದಿನಿಂದಲೂ ಗುರುತಿಸಿರುವುದನ್ನು ಕಾಣಬಹುದಾಗಿದೆ. ಸ್ವಿಜ್ಜರ್ಲೆಂಡಿನಲ್ಲಿ ಭಾರತದ ರಾಯಭಾರಿಯಾಗಿದ್ದ ಡಿ ಬಿ ದೇಸಾಯಿರವರ ಹೆಂಡತಿ ಮಾಧುರಿ ದೇಸಾಯಿ ಆ ಗ್ರಂಥಾಲಯಕ್ಕೆ ನೀಡಿರುವ ಕೆಲವು ಗ್ರಂಥಗಳಲ್ಲಿ ಎರಡು ರಾಷ್ಟ್ರಗಳ ನಡುವಿನ ಸ್ನೇಹಕ್ಕಾಗಿ ಮಾಡಿದ ಪ್ರಯತ್ನಗಳು, ಯುದ್ಧದ ಸಂದರ್ಭದಲ್ಲಿ ತಟಸ್ಥನೀತಿಯನ್ನು ಅನುಸರಿಸಿ ಶಾಂತಿದೂತರಾಂದಂತ್ತೆ, ಭಾರತವೂ ಕೂಡ ಶಾಂತಿಗಾಗಿ ಕಾತರಿಸುತ್ತಿರುವುದನ್ನು ಈ ಎರಡು ರಾಷ್ಟ್ರಗಳು ಜೊತೆಯಾದರೆ ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸಬಹುದೆಂದು ಹೇಳಿರುವುದನ್ನು ತಿಳಿಸಿದ್ದಾರೆ.

## ೨. ಸ್ವಿಜ್ಜರ್‌ಲ್ಯಾಂಡ್ ಮತ್ತು ಉದ್ಯಾನವನಗಳು.

> "ಒಂದು ತಾಸಿನ ಸುಖ ಬೇಕಿದ್ದರೆ ಮಧ್ಯ ಕುಡಿ, ಮೂರು ದಿನದ
> ಸುಖ ಬೇಕೆನ್ನುವುದಾದರೆ ಮದುವೆಯಾಗು, ಒಂದು ತಿಂಗಳ
> ಸುಖ ಬೇಕಾದರೆ ಗೆಳತನಗಳಿಸು, ನಾಲ್ಕಾರು ವರ್ಷದ ಸುಖ ಬೇಕಿದ್ದರೆ
> ಹಣಗಳಿಸು, ಸದಾ ಸುಖಿಯಾಗಬೇಕಿದ್ದರೆ ತೋಟಬೆಳೆಸು."[೨]

ದೇಜಗೌ ಈ ಗಾದೆಯ ಅನುಸಾರವಾಗಿಯೇ ನಡೆದುಕೊಂಡು ಜೀವನ ನಡೆಸಿದವರು. ಗ್ರಾಮಿಣ ಪ್ರದೇಶದಲ್ಲಿ ಜನಿಸಿದ ಇವರು ಬಾಲ್ಯ ಕಳೆದಿದ್ದು, ಪ್ರಕೃತಿಯ ಮಡಿಲಲ್ಲಿ. ಪ್ರಕೃತಿ ಸೌಂದರ್ಯವನ್ನು ನೋಡಿ ಕುಣಿಯುವ, ಆನಂದಿಸುವ, ಪ್ರಕೃತಿಯೊಡನೆ ಪ್ರಕೃತಿಯಾಗಿ ಬಾಹ್ಯವನ್ನೆಲ್ಲ ಮರೆತು ಸುಖ ಪಡುವ ಪುಣ್ಯ ದೇಜಗೌರವರು ಬಾಲ್ಯದಲ್ಲಿಯೆ ಪಡೆದ ಮನೋಧರ್ಮ ಎಂದು ಹೇಳಬಹುದು.

ಇವರು ಕುಲಪತಿಯಾಗಿದ್ದ ಸಂದರ್ಭದಲ್ಲಿ ಎಷ್ಟೋ ಬಂಜರು ಭೂಮಿ ಹಸಿರಾಗಿ ಸಾರ್ಥಕವಾದದುಂಟು. ಸೌಧದ ಮುಂದೆಲ್ಲಾ ಹೂಗಿಡಗಳು ನಗೆ ಬೀರಿದುಂಟು, ಉದ್ಯಾನಗಳು ನಲಿದಾಡಿದುಂಟು. ಅವರೆ ಹೇಳುವಂತೆ 'ಹಸಿರು ನನ್ನ ಬಾಳಿನ ಹೆಮ್ಮೆಯ ಆನಂದದ ಹವ್ಯಾಸವಾಗಿದೆ' ಎಂಬ ಅವರ ಅಂದಿನ ಕರ್ತೃತ್ವ ಶಕ್ತಿಯನ್ನು ಇಂದು ಮಾನಸಗಂಗೋತ್ರಿಯಲ್ಲಿ ಕಂಡು ಬರುವ ತೋಟಗಳಲ್ಲಿ, ಉದ್ಯಾನವನಗಳಲ್ಲಿ ಕಾಣಬುಹುದಾಗಿದೆ.

ದೇಜಗೌರವರು ಸ್ವಿಡ್ಜರ್ಲೆಂಡ್ ಪ್ರವಾಸದಲ್ಲಿ ಕಂಡ ಅನುಭವದ ಸೌಂದರ್ಯವನ್ನು ಸಹೃದಯರಿಗೆ ತಲುಪುವಂತೆ ಮಾಡಿದ್ದಾರೆ. ಅವರು ಹೇಳುವಂತೆ ಉದ್ಯಾನವನಗಳು ಸ್ವಿಡ್ಜರ್ಲೆಂಡಿನ ಪ್ರಾಣ. ಸಸ್ಯವರ್ಗವನ್ನು ರಕ್ಷಿಸುವಲ್ಲಿ ಉದ್ಯಾನಗಳ ಪಾತ್ರ ಮಹತ್ವದ್ದು. ಉದ್ಯಾನವನವೆಂದ ಕೂಡಲೆ ಅವು ಮಾನುಷ ಕೃತವೆಂದು ಭಾವನೆ ಬರುತ್ತದೆ. ಆದರೆ ಅಲ್ಲಿನ ಉದ್ಯಾನವನಗಳು ಮನುಷ್ಯ ಕೃತವು ಹೌದು! ನಿಸರ್ಗ ಕೃತವು ಹೌದು. ಇಡೀ ದೇಶವೇ ಒಂದು ಬೃಹತ್ ಉದ್ಯಾನವನ. ಅದ್ದರಿಂದ ಅಲ್ಲಿನ ಜನ ಆರೋಗ್ಯವಂತರಾಗಿದ್ದಾರೆ, ದಾರಿದ್ರ್ಯ ದೂರರಾಗಿದ್ದಾರೆ. ಅಲ್ಲಿನ ಸೌಧಗಳು ಹಸಿರು ಕುಡಿದು ಅಮಲೇರಿದಂತೆ ಪ್ರವಾಸಿಗರ ಕಣ್ಣಿಗೆ ಕಾಣುತ್ತವೆ.

"ಉದ್ಯಾನ ವಿದ್ಯೆ ವಿಜ್ಞಾನವೂ ಹೌದು ಕಲೆಯೂ ಹೌದು. ಅದು ಸೌಂದರ್ಯ ನೈತಿಕತೆ ಧರ್ಮಗಳ ಹಾಗೂ ಪ್ರಕೃತಿ ಸಂಸ್ಕೃತಿಗಳ ಸಂಗಮ ಸ್ಥಾನ. ಪ್ರತಿಯೊಂದು ಮರದಲ್ಲಿ ಹೂಹಣ್ಣುಗಳಲ್ಲಿ ಭಗವಂತನ ಸಂದೇಶ ಅಭಿವ್ಯಕ್ತಗೊಳ್ಳುತ್ತದೆ"[೩] ಎಂಬ ಅವರ ಈ ಸಾಲುಗಳನ್ನು ಗಮನಿಸಿದಾಗ ಪ್ರಕೃತಿಯಲ್ಲಿ, ಉದ್ಯಾನಗಳಲ್ಲಿ ಭಗವಂತನ ಮಹಿಮೆಯನ್ನು ಕಾಣಬಹುದುದೆಂದು ತಿಳಿಸುತ್ತಾರೆ.

ಉದ್ಯಾನಗಳ ಮತ್ತೊಂದು ಅವತಾರವೇ ತೋಟಗಾರಿಕೆಯಾಗಿದ್ದು. ಇಲ್ಲಿ ಸೌಂದರ್ಯ ದೃಷ್ಟಿ ಮಾತ್ರವಲ್ಲದೆ ಆರ್ಥಿಕ ದೃಷ್ಟಿಯನ್ನು ಕಾಣಬಹುದಾಗಿದೆ. ಸಾಮಾನ್ಯ ಜನರಿರಲಿ ನಗರಸಭೆ ಸಹ ಆಯಾಯಾ ವಿಭಾಗದ ಜನರ ಅಭಿಪ್ರಾಯದ ತಿಳಿಯದೆ ಮರಗಳನ್ನು ಕಡಿಯಕೂಡದು, ಕಾರ್ಖಾನೆಗಳಲ್ಲಿ ದುಡಿಯುವ ಕೂಲಿಗಾರರು ರಾತ್ರಿಯ ವೇಳೆಯಲ್ಲೂ ಸಹ ತೋಟಗಾರಿಕೆ ಮಾಡುತ್ತರೆಂಬುದಕ್ಕೆ ನಿರ್ದಶನಗಳನ್ನು ನೀಡುತ್ತಾರೆ.

"ಮನುಷ್ಯ ಇರುವ ಕಡೆಯೆಲ್ಲಾ ಒಂದು ಉದ್ಯಾನವೋ, ತೋಟವೋ ಇರುತ್ತದೆಂಬುದು ಆ ನಾಡಿನ ಗಾದೆ."[೪] ಸ್ವಿಡ್ಜರ್ಲೆಂಡ್‌ನ ಯಾವ ಭಾಗವನ್ನು ನೋಡಿದರು ಸಹ ಉದ್ಯಾನವನದ ಹಸಿರಿನಿಂದ ಕಂಡು ಬರುತ್ತದೆ. ಅವರೆ ಹೇಳುವಂತೆ "ಎಷ್ಟು ದೂರ ಹೋದರೂ ಹಲವು ಬಗೆಯ ಬಣ್ಣದ ಹಸುರುಗಳೂ, ಹಸುರು ಕಡಿದು ಸೊಕ್ಕಿದಂತಿರುವ ಸೌಧಗಳೂ ಹೊಸಬರ ಕಣ್ಮನಗಳನ್ನು ಬೆರಗುಗೊಳಿಸುತ್ತವೆ."[೫] ದಾರಿಯಲ್ಲಿ ಸಿಕ್ಕಿದ ಮನೆಗಳಿಗೂ ಅಮಲೇರಿದಂತೆ ಭಾಸವಾಗುತ್ತಿತ್ತು. ಎಂಬುದನ್ನು ಓದಿದಾಗ ಕುವೆಂಪುವರ 'ಹಸುರು' ಎಂಬ ಕವಿತೆಯನ್ನು ನೆನೆಸಿಕೊಳ್ಳುತ್ತಾರೆ.

"ಹಸುರತ್ತಲ್ ಹಸುರಿತ್ತಲ್
ಹಸುರೆತ್ತಲ್ ಕಡಲಿನಲಿ
ಹಸುರ್ಗಟಿತೊ ಕವಿಯಾತ್ಮಂ
ಹಸುರ್‌ನೆತ್ತರ್ ಒಡಲಿನಲಿ"[೬]

ನಿಜ್ಜ ಹಸುರಿನ ನಾಡಾದರೂ ಸಹ ಕೈಗಾರಿಕೆ, ವಾಣಿಜೋದ್ಯಮ, ಹಾಗೂ ವ್ಯವಸಾಯಕ್ಕೆ ಭೂಮಿ ಬಳಕೆ ಮಾಡಿರುವುದನ್ನು ಲೇಖಕರು ಗುರುತಿಸಿದ್ದಾರೆ. ಅಲ್ಲಿನ ಧೂಳನೆಲ್ಲಾ ಹಸಿರು ಅದುಮಿಟ್ಟಿದ್ದು, ಮಂಜು ಮುಸುಕಿದಾಗ ಸ್ವಿಡ್ಜರ್ಲೆಂಡ್ ಕೊಡಗಿನಂತೆ ಕಂಡು ಬರುತ್ತದೆ ಎಂದು ತಿಳಿಸಿರುತ್ತಾರೆ.

ಹೀಗೆ ಸ್ವಿಡ್ಜರ್ಲೆಂಡ್ ಯೂರೋಪಿನ ಉದ್ಯಾನ, ಉದ್ಯಾನಗಳನಗರ, ಮಹಾಉದ್ಯಾನ ಎಂದು ಹೆಸರು ಪಡೆದಿದ್ದರು, ಇಲ್ಲಿ ಗಡಿಯಾರ, ಚಾಕೊಲೆಟ್, ಮತ್ತು ಬ್ಯಾಂಕ್‌ಗಳು ಪ್ರಸಿದ್ಧಿ ಪಡೆದಂತೆ ಉದ್ಯಾನಗಳು ಪ್ರಸಿದ್ಧಿ ಪಡೆಯಲ್ಲಿಲ್ಲ. ಪ್ರಸ್ತುತ ಜಗತ್ತಿನ ಸಮಸ್ಯೆಯಾದ ಹವಾಮಾನ ವೈಪರೀತ್ಯದಂತ ಸಮಸ್ಯೆಗಳಿಗೆ ಉದ್ಯಾನಗಳು ಪರಿಹಾರ ನೀಡಿ ವಾಯುಮಾಲಿನ್ಯ ತಡೆಯುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಮತ್ತು ಜಗತ್ತನ್ನು ರಕ್ಷಿಸುತ್ತವೆ.

## ೩. ರೈತ ಮತ್ತು ಹಳ್ಳಿ.

ಮೂಲತಃ ಗ್ರಾಮೀಣ ಕುಟುಂಬದಲ್ಲಿ ಹುಟ್ಟಿ ಬಂದ ಪ್ರೊ. ದೇಜಗೌ ರವರು ಯಾವುದೇ ದೇಶಕ್ಕೆ ಪ್ರವಾಸ ಕೈಗೊಂಡರು, ಅಲ್ಲಿನ ಹಳ್ಳಿಗಳಿಗೆ ಭೇಟಿ ನೀಡಿ ಅಲ್ಲಿನ ಪರಿಸ್ಥಿತಿಯನ್ನು ಕಂಡು ತಮ್ಮ ಗ್ರಂಥಗಳಲ್ಲಿ ನಮೂದಿಸಿರುವುದನ್ನು ಕಾಣಬಹುದಾಗಿದೆ.

ಇವರು ಸ್ವಿಡ್ಜರ್ಲೆಂಡಿನ ಪ್ರವಾಸ ಕೈಗೊಂಡಾಗ ಗಾಜೆಲ್ ಮತ್ತು ಮೆಂಗೆಸ್ಟ್ರಿಫ್ ಎಂಬ ಹಳ್ಳಿಗಳಿಗೆ ಹೋಗಿ ಅಲ್ಲಿನ ಪರಿಸ್ಥಿತಿ ಮತ್ತು ತಮ್ಮಗಾದ ಅನುಭವವನ್ನು ಹಂಚಿಕೊಂಡಿದ್ದಾರೆ. ಸ್ವತಹ ರೈತನ ಮಗನಾದ ದೇಜಗೌ ಸ್ವಿಡ್ಜರ್ಲೆಂಡಿನಲ್ಲಿ ಸಹಜವಾಗಿಯೇ ಹಳ್ಳಿಗಳಿಂದ ಆಕರ್ಷಿತರಾಗುತ್ತಾರೆ. ಅಲ್ಲಿನ ಅಚ್ಚು ಕಟ್ಟಿಗೆ ಮಾರು ಹೋಗುತ್ತಾರೆ. ಅಲ್ಲಿಯ ರೈತರ ಮನೆಯ ಕೊಟ್ಟಿಗೆಗಳ ಅಚ್ಚುಕಟ್ಟು, ಸ್ವಚ್ಚತೆ, ಮನೆಯಲ್ಲಿರುವ ಎಲ್ಲ ಜನರ ಕಷ್ಟ ಸಹಿಷ್ಣತೆಯನ್ನು ನೋಡಿದಾಗ ನಾವು ಆ

ಮಟ್ಟಕ್ಕೇರುವ ಬಗೆ ಎಂತೆಂದು ದೇಜಗೌ ಒಮ್ಮೊಮ್ಮ ಉದ್ವಿಗ್ನರಾಗುವುದ್ದನ್ನು ಕಾಣಬಹುದಾಗಿದೆ. ನಮ್ಮ ಮಲೆನಾಡಿನಲ್ಲಿರುವ ಮನೆಗಳಂತೆ ಅಲ್ಲಿಯೂ ಮನೆಗಳಿವೇ ಎಂಬುದನ್ನು ಗುರುತಿಸಿದ ಲೇಖಕರು, ನಮಗಿಂತಲೂ ಅಲ್ಲಿ ಒಪ್ಪಓರಣ ಹೆಚ್ಚೆಂದು ಹೇಳುತ್ತಾರೆ.

ಗಾಜೆಲ್ ಎಂಬ ಹಳ್ಳಿಯಲ್ಲಿ ಹೋಗುವಾಗ ದಾರಿಯಲ್ಲಿ ಇದ್ದ ಹೂವಿನ ಅಂಗಡಿಯ ಬಳಿ ಕಾರನ್ನು ನಿಲ್ಲಿಸುತ್ತಾರೆ. ಆ ಅಂಗಡಿ ತೋಟಕ್ಕೆ ಸೇರಿದಂತಿದೆ. ಅಲೆಲ್ಲ ನರಪಿಳ್ಳೆಗಳೆಲ್ಲಾ ಕಾಣುತ್ತಿಲ್ಲ, ಆದರೂ ವ್ಯಾಪಾರ ನಡೆಯುತ್ತಿದೆ. ಹೇಗೆ? ಬೇಕಾದವರು ಹೂ ಕಿತ್ತು ತಂದು ತೂಗಿ ಗೋಡೆಯ ಮೇಲೆ ಪಟ್ಟಿಯಲ್ಲಿರುವ ದರಗಳ ಪ್ರಕಾರ ಹಣ ಏಣಿಸಿ ಗೋಲಕಕ್ಕೆ ಹಾಕಿದರೆ ಆಯಿತು. ಇಂಥ ಅಂಗಡಿಗಳು ಸ್ವಿಡ್ಜರ್ಲೆಂಡಿನ ಹಲವು ಕಡೆಗಳಲ್ಲಿ ಕಂಡು ಬರುತ್ತವೆ. ಇದನ್ನು ನೋಡಿದ ಲೇಖಕರು ಒಮ್ಮಲೇ ನಿಟ್ಟುಸುರು ಬಿಟ್ಟು, ಇಲ್ಲಿನ ಈ ಪ್ರಮಾಣಿಕತೆ ನಮ್ಮ ದೇಶದಲ್ಲೂ ಇರಬೇಕಿತ್ತು ಎಂದುಕೊಳುತ್ತಾರೆ.

ರೈತನ ಮಗನಾದ ದೇಜಗೌರವರಿಗೆ ರೈತರ ಬಗ್ಗೆ ತುಂಬ ಕಾಳಜಿ. ರೈತರೆ ನಾಡಿನ ಬೆನ್ನೆಲುಬು, ಸಮಾಜದ ಇತರ ವರ್ಗದವರಿಗು ರೈತನಿಂದಲೆ ಸುಖ ಸಂಪತ್ತು ದೊರೆಯುತ್ತದೆ. 'ರೈತನ ಪತನವೇ, ರಾಷ್ಟ್ರ ಪತನಕ್ಕೆ ಹೆದ್ದಾರಿ' ಎಂದು ರೈತರ ಪರವಾಗಿ ವಾದಿಸುವವರು.

"ರೈತನಿಂ ಧನಧಾನ್ಯಾ ಸಂಪತ್ತು ಹೆಚ್ಚುವುದು,
ರೈತನಿರೆ ವಿಜ್ಞಾನ ಯಂತ್ರಗಳು ನಡೆಯುವುವು
ರೈತನಿಂ ರಾಜಕಾರಣಿ, ಮಂತ್ರಿ ಪಡಿಂತರು ಮರೆಯುವರು,
ರೈತನಿಂ ಸುಕ್ಷೇಮ ಧರೆಗೆ ಮಗಳೆ,"[೭]

ಈ ಚುಟುಕಿನಲ್ಲಿ ರೈತನ ಮಹತ್ವವನ್ನು ತಿಳಿಸುವ ಪ್ರೊ.ದೇಜಗೌ ತಮ್ಮ ಸ್ವಿಡ್ಜರ್ಲೆಂಡಿನ ಪ್ರವಾಸದ ಸಂದರ್ಭದಲ್ಲಿ ಅಲ್ಲಿನ ರೈತನ ಬಗ್ಗೆ ಅಧ್ಯಾಯನ ನಡೆಸುತ್ತಾರೆ. ಅಲ್ಲಿನ ರೈತರು ವಿದ್ಯಾವಂತರು, ಎಲ್ಲಾ ಕೆಲಸಗಳನ್ನು ಶಾಸ್ತ್ರೀಯವಾಗಿ ನಡೆಸುವವರು. ನಗರ ಪ್ರದೇಶದ ಜನರಿಗೆ ಸರಿಸಮನಾಗಿ ಜೀವನ ನಡೆಸುವ ದಕ್ಷತೆವುಳ್ಳವರು ಎಂದು ತಿಳಿಸಿದ್ದಾರೆ. ಅಲ್ಲಿನ ಸರ್ಕಾರ ರೈತರಿಗೆ ನೀಡುವ ಪ್ರೋತ್ಸಾಹ, ರೈತನಿಗೆ ಕನಿಷ್ಟ ಪಕ್ಷ ಎಂಟು ಹೆಕ್ಟೇರ್ ಜಮೀನಿರಬೇಕೆಂದು ಸರ್ಕಾರ ಕಾನೂನು ಮಾಡಿ ಭೂಮಿಯನ್ನು

ಮರು ಹಂಚಿಕೆ ಮಾಡಿದ್ದು, ಭೂಮಿ ಇಲ್ಲದವರಿಗೆ ಪ್ರತಿಫಲ ನೀಡಿರುವುದು ರೈತ ಬಂಧುಗಳಾದ ದೇಜಗೌ. ನಮ್ಮ ರಾಷ್ಟ್ರದಲ್ಲಿ ಈ ಸೌಲಭ್ಯ ಇಲ್ಲದಿರುವುದನ್ನು ಕಂಡು ಕೊರಗುತ್ತಾರೆ.

## ೪. ವಸ್ತು ಸಂಗ್ರಹಾಲಯಗಳು.

ಸಂಸ್ಕೃತಿಯ ಬೆಳವಣಿಗೆಗೆ, ರಕ್ಷಣೆಗೆ ಹಾಗೂ ರಾಷ್ಟ್ರೀಯತ್ವಕ್ಕೆ ಶೈಕ್ಷಣಿಕ ಸಂಶೋಧನೆಗಳ ಪ್ರಗತಿಗೆ ಮತ್ತು ಸತ್ಯಾನ್ವಷಣೆಯ ಸಿದ್ದಿಗಾಗಿ ವಸ್ತು ಸಂಗ್ರಹಾಲಯಗಳ ಪಾತ್ರ ಮಹತ್ವದ್ದಾಗಿದೆ. ಸ್ವಿಡ್ಜರ್ಲೆಂಡಿನ ದೊಡ್ಡ ದೊಡ್ಡ ನಗರಗಳಲ್ಲಿ ನಾಲ್ಕಾರು ವಸ್ತು ಸಂಗ್ರಹಾಲಯಗಳಿದ್ದು, ನಾಣ್ಯಗಳ, ಬೂಟುಗಳ, ಜಾನಪದ ವ್ಯಾದ್ಯಗಳ ವಸ್ತು ಸಂಗ್ರಹಾಲಯಗಳು ಮತ್ತು ಐನ್‌ಸ್ಟೀನ್ ಮ್ಯೂಸಿಯಂ ಪ್ರಮುಖವಾದವುಗಳಾಗಿವೆ.

ಜಾನಪದ ವ್ಯಾದ್ಯಗಳ ವಸ್ತು ಸಂಗ್ರಹಾಲಯವನ್ನು ನೋಡಲು ಹೋದ ದೇಜಗೌ ರವರಿಗೆ ನೂರು-ಇನ್ನೂರು ವರ್ಷಗಳ ಹಿಂದಿನ ಸ್ವಿಡ್ಜರ್ಲೆಂಡಿನ ಹಳ್ಳಿಯೊಂದರ ಜಾತ್ರೆಗೆ ಹೋದ ಅನುಭವವನ್ನು ಮತ್ತು ೧೫೦ ಎಕರೆ ವಿಸ್ತೀರ್ಣವುಳ್ಳ ಕಾನನಾವೃತ ಪರ್ವತ ಕಂದರದಲ್ಲಿ ನಿರ್ಮಿಸಿರುವ 'ಬಯಲು ವಸ್ತು ಸಂಗ್ರಹಾಲಯ'ಕ್ಕೆ ಹೋದಾಗ ನೂರಾರು ವರ್ಷಗಳ ಹಿಂದಿನ ಸ್ಥಳೀಯ ಶಿಲ್ಪವನ್ನು ಗ್ರಾಮಾಂತರ ಜೀವನ ಮತ್ತು ಕರಕುಶಲ ಕೈಗಾರಿಕೆಗಳನ್ನು ಹಿಂದಿನ ಕಾಲದಲ್ಲಿದಂತೆಯೆ ತೋರಿಸುವ ಮಹತ್ವಾಕಾಂಕಕ್ಷೆಯ ಸಂಗ್ರಹಾಲಯವಾಗಿದ್ದು ಗ್ರಾಮಾಂತರ ಪ್ರದೇಶದ ಜನ ಹಿಂದೆ ಹೇಗೆ ಜೀವನ ನಡೆಸುತ್ತಿದ್ದರೆಂಬುದನ್ನು ಜೀವಂತ ಸ್ಥಿತಿಯಲ್ಲಿ ಪ್ರದರ್ಶಿಸಲಾಗಿದೆ.

ದೇಜಗೌ ಬರ್ನ್ಾ ಗೆ ಹೋದ ಮೇಲೆ ನಗರದ ಮಧ್ಯ ಭಾಗದಲ್ಲಿರುವ ಐನ್‌ಸ್ಟೀನ್ ಮ್ಯೂಸಿಯಂ ಗೆ ಭೇಟಿ ನೀಡುತ್ತಾರೆ. ಐನ್‌ಸ್ಟೀನ್‌ರವರ ಮನೆಯೇ ಇಂದು ವಸ್ತು ಸಂಗ್ರಹಾಲಯವಾಗಿದೆ. ಐನ್‌ಸ್ಟೀನ್‌ರವರು ಮದುವೆಯಾಗಿದ್ದು, ಮೊದಲ ಮಗ ಹುಟ್ಟಿದ್ದು, ಸಾಪೇಕ್ಷ ಸಿದ್ದಾಂತವನ್ನು ಪ್ರಕಟಿಸಿದ್ದು ಇದೆ ಮನೆಯಲ್ಲಿ ಆದರಿಂದ ಅಲ್ಲಿರುವ ಎಲ್ಲಾ ವಸ್ತುಗಳನ್ನು ಸಂರಕ್ಷಿಸಲಾಗಿದೆ. ಅಲ್ಲಿನ ಗೋಡೆಯ ಮೇಲೆ "ಸಂಪ್ರದಾಯ ಹಾಗೂ ಆಸ್ತ್ರಗಳ ಕುರುಡು ನಂಬಿಕೆಯೇ ಸತ್ಯದ ಮಹಾಶತ್ರು" ಎಂಬ ಐನ್‌ಸ್ಟೀನ್‌ರವರ ಸೂಕ್ತಿಗಳನ್ನು ನೋಡಿದಾಗ ನಮಗೂ ರೋಮಾಂಚನ ವಾಗುತ್ತದೆ.

ದೇಜಗೌ ಈ ಮೇಲಿನ ವಸ್ತು ಸಂಗ್ರಹಾಲಯಗಳ ಜೊತೆಗೆ 'ಹೈನ್‌ರಿಚ್ ಪೆಸ್ಟಾಲಜಿ' ಅವರ ಶಿಕ್ಷಣಸಂಸ್ಥೆಗೆ ಭೇಟಿ ನೀಡಿದಾಗ ಶಿಕ್ಷಣಕ್ಷೇತ್ರದಲ್ಲಿ ಅವರು ನೀಡಿರುವ ಕೊಡುಗೆಯನ್ನು ನೆನೆದಿದ್ದಾರೆ. ಮತ್ತು ಜೂಲಿಯಸ್ ಸೀಜರ್ ನಡೆದಾಡಿದ ತಾಣಗಳಿಗೆ ಭೇಟಿ ನೀಡಿದಾಗ ಅಲ್ಲಿನ ಮಣ್ಣನ್ನು ಕಣ್ಣಿಗೊತ್ತಿಕೊಳ್ಳುವ ಇಚ್ಛೆಯನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದಾಗಿದೆ.

ಸ್ವಿಡ್ಜರ್ಲೆಂಡಿನ ಜನರು ಶ್ರಮ ಜೀವಿಗಳು, ಗುಣಗ್ರಾಹಿಗಳು, ವಿದ್ವತ್ ಪಕ್ಷಪಾತಿಗಳು, ಧರ್ಮಪ್ರೀಯರು. ದಣಿದ ಬುದ್ಧಿ ಜೀವಿಗಳಿಗೆಂತು ವಿಶ್ರಾಮಧಾಮವೊ, ಸಾಹಿತಿ ಕಲಾವಿಧರಿಗೆ ಸ್ಪೂರ್ತಿಶಕ್ತಿಯಾಗಿದೆಯೋ ಅಂತೆಯೇ ಅದು ನಿತಾಶ್ರಿತರಿಗೆ ಹಾಗೂ ದೇಶಭ್ರಷ್ಟರಿಗೆ ಆಶ್ರಯಸ್ಥಾನವಾಗಿದೆ. ಗಿಬನ್, ಜಾರ್ಜ್, ಎಲಿಯಟ್, ಶೆಲ್ಲಿ ಮೊದಲಾದವರಿಗೆ ಸ್ಪೂರ್ತಿಯ ನಲೆಯಾದಂತೆ, ಬೈರನ್, ವಿಕ್ಟರ್, ಹೂಗೋ ರಂತ ಸಂಪ್ರದಾಯ ವಿರೋದಿಗಳು ಇಲ್ಲಿ ಇರುವುದನ್ನು ಕಾಣಬಹುದಾಗಿದೆ.

"ದ್ರೌಪದಿ ಸ್ವರ್ಗದ ಸೌಂಧಿಕಾ ಪುಷ್ಪವನ್ನು ಅಪೇಕ್ಷಿಸುತ್ತಾಳೆ. ಆದರೆ ತಾನೇ ಅಲ್ಲಿಗೆ ಹೋಗಲಾರಳು. ಭೀಮ ಅದನ್ನು ಅವಳಿದ್ದಲ್ಲಿಗೆ ತಂದು ಕೊಡುತ್ತಾನೆ. ವಿದೇಶಗಳಿಗೆ ಹೋಗಲಾರದವರಿಗೆ ಆ ದೇಶಗಳನ್ನು ವಾಙ್ಮಯ ದರ್ಪಣದಲ್ಲಿ ಪ್ರದರ್ಶಿಸುವ, ಅವರನ್ನು ಅಲ್ಲೆಲ್ಲ ಕರೆದೊಯ್ದು ಸುಂದರ ದೃಶ್ಯಗಳನ್ನು ತೋರಿಸುವ"[೮] ದೇಜಗೌ ಪ್ರವಾಸ ಸಾಹಿತ್ಯ ಸರಳ ಸರಾಗ ಶೈಲಿಯಿಂದ, ಕಣ್ಣಿಗೆ ಕಟ್ಟುವ ದೃಶ್ಯಗಳ ವರ್ಣನೆಯಿಂದ, ಅನುಭವಗಳ ಶ್ರೀಮಂತಿಕೆಯಿಂದ ನಿಚ್ಚಹಸುರಿನ ನಾಡಿನಲ್ಲಿ ವಿಶಿಷ್ಟ ಪ್ರವಾಸ ಕಥನವಾಗಿದೆ.

## ಕೊನೆಟಿಪ್ಪಣಿಗಳು

೧. ದೇಜಗೌರವರ – ನಿಚ್ಚಹಸುರಿನ ನಾಡಿನಲ್ಲಿ ಪುಟ– ೪೨

೨. ಡಾ// ಟಿ ಕೆ ಕೆಂಪೇಗೌಡ ರವರ – ಅನಿಕೇತನದಲೊಂದು ವಿಶ್ವಚೇತನ ಪುಟ– ೧೧೫

೩. ದೇಜಗೌರವರ – ನಿಚ್ಚಹಸುರಿನ ನಾಡಿನಲ್ಲಿ ಪುಟ– ೧೩೯

೪. ಅದೇ, ಪುಟ– ೧೪೨

೫. ಅದೇ, ಪುಟ– ೧೪೧, ೧೪೨

೬. ಎಂ ವಿಜಯಲಕ್ಷ್ಮೀರವರ – ದೇಜಗೌ ಜೀವನ ಮತ್ತು ಸಾಧನೆ ಪುಟ – ೩೪೪

೭. ಡಾ// ಎಂ.ಜಿ.ಆರ್ ಅರಸ್ ರವರ ಚುಟುಕು, ಮಂದಾರ, ಪುಟ–೧೨

೮. ಪುಸ್ತಕ ಪ್ರಪಂಚ ದೇಜಗೌ ವಿಶೇಷ ಸಂಚಿಕೆ ಪುಟ–೧೨೦

# ೩. ಹಳದಿ ಕಲ್ಲಿನ ಉದ್ಯಾನ

ಪ್ರೊ. ದೇಜಗೌರವರು ಅನೇಕ ಬಾರಿ ಅಮೇರಿಕಾ ಪ್ರವಾಸ ಕೈಗೊಂಡಿದ್ದರು ಹಳದಿ ಕಲ್ಲಿನ ಉದ್ಯಾನವನ್ನು ನೋಡಲು ಸಾಧ್ಯವಾಗದೇ ಇದ್ದಾಗ, ನೋಡಿದವರಿಂದ ಕೇಳಿ, ಗ್ರಂಥಗಳನ್ನೋದಿ ರುದ್ರರಮಣೀಯತೆಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು, ಚಿತ್ರಿಸಿಕೊಂಡು ಆನಂದಿಸುತ್ತಿದ್ದರು. ಉದ್ಯಾನವನ್ನು ನೋಡವ ಕುತೂಹಲದಲ್ಲಿದ್ದ ಶ್ರೀಯುತರಿಗೆ ೧೯೯೮ ರಲ್ಲಿ ಅಲ್ಲಿಗೆ ಮಡದಿ ಸಮೇತ ಹೋದ ಸಂದರ್ಭದಲ್ಲಿ ಅವರು ದಾಖಲಿಸಿದ ಪುಟ್ಟ ಕೃತಿಯೇ 'ಹಳದಿ ಕಲ್ಲಿನ ಉದ್ಯಾನ'. ಈ ಕೃತಿಯ ವಿಶೇಷವೇನೆಂದರೆ 'ಪ್ರವಾಸ ಕಥನ ಮತ್ತು ಉಷ್ಣೋತ್ಪನ್ನ ವೈಚಿತ್ರ್ಯಗಳ ಕಥೆ ಎರಡು ಕೂಡಿ ಆಗಿರುವಂತದ್ದು.'೧ ದೇಜಗೌ ರವರು ಈ ಪ್ರವಾಸ ಕಥನವನ್ನು ಮಕ್ಕಳಿಗಾಗಿಯೇ ರಚನೆ ಮಾಡಿದ್ದು, ಮಕ್ಕಳಲ್ಲಿ ಈ ಉದ್ಯಾನವನ್ನು ಕುರಿತು, ಇದರ ಸೃಷ್ಟಿಯ ಕುರಿತು ಕುತೂಹಲವನ್ನು ಮೂಡಿಸಿದ್ದಾರೆ.

ಅಮೇರಿಕಾ ವಿಸ್ಮಯಗಳ ನಾಡು. ನಿಸರ್ಗದ ವಿಸ್ಮಯಗಳಿವೆ, ಮನುಷ್ಯ ನಿರ್ಮಿಸಿರುವ ವಿಸ್ಮಯಗಳಿವೆ. ಅಂತಹ ಅದ್ಭುತಗಳಲ್ಲಿ ಹಳದಿ ಕಲ್ಲಿನ ರಾಷ್ಟೀಯ ಉದ್ಯಾನ (ಯೆಲ್ಲೊ ಸ್ಟೋನ್ ನ್ಯಾಷನಲ್ ಪಾರ್ಕ್) ಒಂದು ದೊಡ್ಡ ಅದ್ಭುತ, ನಿಸರ್ಗ ಕರುಣಿಸಿರುವ ಅದ್ಭುತವಾಗಿದೆ. ಲಕ್ಷಾಂತರ ಎಕರೆಯ ಸಸ್ಯಜಲ ಸಮೃದ್ಧಿಯ ಆ ಪ್ರದೇಶದ ನೆಲದೊಳಗೆ, ಮೇಲ್ಮೈಗ್ಗೆ ಹತ್ತಿರದಲ್ಲಿ ಕುದಿಯುವ ಶಿಲಾನಿಲ ದ್ರವ ಪ್ರವಾಹ ನರ್ತಿಸುತ್ತದೆ. ಅದೇ ಕಾರಣದಿಂದಾಗಿ ವನಶ್ರೀಗೆ ಪ್ರತಿಸ್ಪರ್ಧಿಯಾಗಿ ಸಾವಿರಾರು ಉಷ್ಣೋತ್ಪನ್ನ ವೈಚಿತ್ರ್ಯಗಳು, ಹಬೆಯ ಜೀರ್ಕೊಳವಿಗಳು, ಬಿಸಿನೀರಿನ ಊಟೆಗಳು, ಕುದಿನೀರಿನ ಗುಂಡಿಗಳು ಜಿಂಕೆ, ಕರಡಿ, ಮೊದಲಾದ ಪ್ರಾಣಿಗಳಿವೆ. ಬೆಂಕಿ-ಹಿಮಗಳೆರೆಡೂ ಸದಾ ಸರಸವಾಡುತ್ತವೆ; ವಿವಿಧ ಬಣ್ಣಗಳು ನರ್ತಿಸುತ್ತವೆ; ನೀರು ಲಾಗ ಹಾಕುತ್ತದೆ; ನಕ್ಷತ್ರಗಳು ಸರೋವರಕ್ಕಿಳಿದು ಕುಣಿಯುತ್ತವೆ. ಅದೊಂದು ನಿಸರ್ಗದ ಅದ್ಭುತ ನಾಟಕ, ಬೆರಗುಗೊಳಿಸುವ ಇಂದ್ರಜಾಲ, ಅದೊಂದು ಮಹಾಕಾವ್ಯ. ಪ್ರೊ. ದೇಜಗೌರವರು ಈ ಉದ್ಯಾನಕ್ಕೆ ಭೇಟಿ ನೀಡಿದಾಗ ಕಂಡ ಅದ್ಭುತ ನೋಟ, ವಿಸ್ಮಯಗಳನ್ನು ಮತ್ತು ಅದರ ಚರಿತ್ರೆಯನ್ನು ಈ ಕಥನದಲ್ಲಿ ಕಾಣಬಹುದು.

# ೧. ಹಳದಿ ಕಲ್ಲಿನ ಉದ್ಯಾನದ ಇತಿಹಾಸ

ಈ ಉದ್ಯಾನಕ್ಕೆ ಇಪ್ಪತ್ತೈದು ಸಾವಿರ ಲಕ್ಷ ವರ್ಷಗಳ ಇತಿಹಾಸವಿದೆ ಎಂದು ಭೂವಿಜ್ಞಾನಿಗಳು ಹೇಳುತ್ತಾರೆ. ಐದು ಸಾವಿರ ಲಕ್ಷ ವರ್ಷಗಳ ಹಿಂದೆ ಆ ನೆಲ ಕುಸಿದು ತಗ್ಗಾಯಿತು. ಲಕ್ಷಾಂತರ ವರ್ಷ ಮೇಲಿಂದ ಮೇಲೆ ಆದಿಕಾಲದ ಸಾಗರ ತಗ್ಗು ಜಾಗದಲ್ಲೆಲ್ಲ ತುಂಬಿಕೊಳ್ಳುತ್ತಿತ್ತು. ಹಿಮಯುಗದಲ್ಲಿ ಹವಮಾನ ಬದಲಾವಣೆ ಹೊಂದುತ್ತಿತ್ತು. 650 ಲಕ್ಷ ವರ್ಷಗಳ ಹಿಂದೆ ಕಲ್ಲು ಬೆಟ್ಟಗಳು ನಮ್ಮ ಹಿಮಾಲಯ ಪರ್ವತದಂತೆ ಮೆಲ್ಲಮೆಲ್ಲನೆ ಮೇಲೇಳುತ್ತಿದ್ದವು. ಹೀಗಾಗಿ ಅಲ್ಲಿ ಹಲವು ಬೆಟ್ಟಸಾಲುಗಳಿವೆ.

ಈ ಉದ್ಯಾನ ಅಮೇರಿಕನ್ನರಿಗೆ ತಿಳಿಯುವ ಮೊದಲು ಕೆಂಪು ಇಂಡಿಯನ್ನರಿದ್ದರು. ಇವರು ಬುಡಕಟ್ಟು ಜನಾಂಗಕ್ಕೆ ಸೇರಿವರಾಗಿದ್ದು ಆ ಕಾಡಿನ ರಹಸ್ಯವನ್ನು ತಿಳಿಯದವರು, ಸೌಂದರ್ಯವನ್ನು ಅರಿಯದವರು. ಇವರು ಭೇಟಿಯಾಡಲು ಒಂದುಕಡೆಯಿಂದ ಇನ್ನೊಂದು ಕಡೆಗೆ ಅಲೆಯುತ್ತಿದ್ದಾಗ ಈ ಉದ್ಯಾನಕ್ಕೆ ಬಂದು ಹೋಗಿದ್ದಿರಬಹುದು. ನಂತರ ೧೮೦೮ ರಲ್ಲಿ ಜಾನ್ ಕೋಲ್ಟರ್ ಎಂಬ ಬಿಳಿಯನೋಬ್ಬ ಈ ಪ್ರದೇಶಕ್ಕೆ ಬಂದು ಇಲ್ಲಿ ಕಂಡ ವಿಸ್ಮಯವನ್ನು ಕರಿತು ಬರೆದಾಗ ಅಮೇರಿಕನ್ನರು ಇದನ್ನು ಒಪ್ಪಲು ಸಿದ್ದರಿರಲಿಲ್ಲ.

೧೮೩೫ ರಲ್ಲಿ ಆಸ್ಬರ್ನ್ ರಸೆಲ್ ಎಂಬ ಸಾಹಸಿಗ ತನ್ನ ಗೆಳೆಯನೊಂದಿಗೆ ಈ ಉದ್ಯಾನಕ್ಕೆ ಭೇಟಿ ನೀಡಿ ಅಲ್ಲೇ ವಾಸ ಮಾಡಿ ಅಲ್ಲಿನ ಕೆಲವು ವಿಚಾರಗಳನ್ನು ದಾಖಲಿಸುತ್ತಾನೆ. ಅಲ್ಲದೆ ಕೆಲವು ಬುಡಕಟ್ಟು ಜನಾಂಗದಿಂದ ಸಸ್ಯಸಂಪತ್ತು, ಪ್ರಾಣಿಸಂಪತ್ತು, ಲೂಟಿಯಾಗುತ್ತಿರುವ, ಮತ್ತು ಪರಿಸರ ಹದಗೆಡುತ್ತಿರುವ ಬಗ್ಗೆ 'ರಸೆಲ್' ಬರೆದಿದ್ದು, ಇದು ಕಿವಿಯಿಂದ ಕಿವಿಗೆ ಹಬ್ಬಿ ಸಂಸತ್ ಸಭೆಯಲ್ಲಿಯೂ ಚರ್ಚೆಯಾಗಿ ಈ ಪ್ರದೇಶವನ್ನು ಉಳಿಸುವ ಬಗ್ಗೆ ತಿರ್ಮಾನಿಸಲಾಗುತ್ತದೆ. ೧೮೭೨ ಮಾರ್ಚ್ ೦೧ ರಂದು ಆಗಿನ ಅಧ್ಯಕ್ಷರಾದ ಯೂಲಿಸಿಸ್ ಎಸ್.ಗ್ರಾಂಟ್ ರವರು ಈ ಪ್ರದೇಶಕ್ಕೆ ರಾಷ್ಟ್ರೀಯ ಉದ್ಯಾನದ ಸ್ಥಾನಮಾನವನ್ನು ನೀಡಿ ಆಜ್ಞೆ ಹೊರಡಿಸುತ್ತಾರೆ, ಇದು ಜಗತ್ತಿನ ಮೊಟ್ಟ ಮೊದಲ ರಾಷ್ಟ್ರೀಯ ಉದ್ಯಾನ ಎಂಬ ಹೆಗ್ಗಳಿಕೆ ಪಡೆದಿದೆ. ದೇಶ–ವಿದೇಶದ ಪ್ರವಾಸಿಗರನ್ನು ಕೈಬೀಸಿ ಕರೆಯುತ್ತಿದೆ.

# ೨. ಹಳದಿ ಕಲ್ಲಿನ ರಾಷ್ಟ್ರೀಯ ಉದ್ಯಾನ ಮತ್ತು ವಿಸ್ಮಯಗಳು

ಜಗತ್ತಿನಲ್ಲಿಯೇ ವಿಶಿಷ್ಟವಾದ ಮತ್ತು ಸುಂದರವಾದ ಈ ಉದ್ಯಾನ ಅಮೇರಿಕಾ ಸಂಯುಕ್ತ ಸಂಸ್ಥಾನದ ಉತ್ತರ ಭಾಗದಲ್ಲಿ ವಯೊಮಿಂಗ್ ಎಂಬ ರಾಜ್ಯದಲ್ಲಿ ಬಹುಭಾಗ ಇದ್ದು, ಅಲ್ಪಭಾಗ ಮಾತ್ರ ಇಡಾಹೊ ಮತ್ತು ಮೊಂಟಾನ ರಾಜ್ಯಗಳಿಗೆ ಚಾಚಿಕೊಂಡಿದೆ. ಇದರ ವಿಸ್ತೀರ್ಣ ೩೩೬೪ ಚದರ ಮೈಲಿ. ಉತ್ತರ ದಕ್ಷಿಣವಾಗಿ ೬೩ ಮೈಲಿ, ಪೂರ್ವಪಶ್ಚಿಮವಾಗಿ ೫೪ ಮೈಲಿ ಉದ್ದವಿದೆ. ಇದು ಸಮುದ್ರ ಮಟ್ಟದಿಂದ ೮೦೦೦ ಅಡಿ ಎತ್ತರದಲ್ಲಿದೆ. ಇಲ್ಲಿ ಎಲ್ಲೆಲ್ಲೂ ಹಳದಿಕಲ್ಲುಗಳು ದೊರೆಯುವುದರಿಂದ ಈ ಉದ್ಯಾನಕ್ಕೆ ಹಳದಿ ಕಲ್ಲಿನ ಉದ್ಯಾನ ಎಂಬ ಹೆಸರು ಬಂದಿದೆ.

ಈ ಉದ್ಯಾನದಲ್ಲಿನ ಮಣ್ಣು ಕಲ್ಲುಗಳು ಆಗಾಗ್ಗೆ ಬದಲಾವಣೆಯಾಗುತ್ತವೆ. ಭೂರಚನೆಯೇ ಬದಲಾಗುತ್ತದೆ. ಅದಕ್ಕೆ ಕಾರಣ ಭೂಮಿಯೊಳಗಣ ಶಾಖ ಹಾಗೂ ಮಾಗ್ಮ ಎಂಬ ಹೆಸರಿನ ಕಲ್ಲು ಲೋಹ ಕರಗಿದ ಕುದಿಕಲ್ಲು ನೀರು ಹರಿಯುವುದು. ಇದರಿಂದ ನೆಲ ಗುಡುಗುತ್ತದೆ. ಅನೇಕ ನಷ್ಟಗಳು ಸಂಭವಿಸುತ್ತವೆ. ಆ ನೀರು ಕಂಡಿ ಬಿರುಕುಗಳನ್ನು ಮಾಡಿಕೊಂಡು ಹೊರಗಡೆಗೂ ನುಗ್ಗುತ್ತದೆ. ನುಗ್ಗುವಾಗ ಒಳಗಿನ ವಸ್ತುಗಳನ್ನು ಉಗಿಯುತ್ತದೆ. ಇದನ್ನೇ ಬೆಂಕಿಮೊಗ ಅಥವಾ ಜ್ವಾಲಾಮುಖಿ ಎಂದು ಕರೆಯುತ್ತಾರೆ. ಅಗ್ನಿಯಿಲ್ಲದ ಜಾಗವೆಲ್ಲಿದೆ? ಅಗ್ನಿಭೂಮಿಯೊಳಗಿದೆ. ಬಾನಲ್ಲಿರುವ ಸೂರ್ಯನ ಕಿರಣದಲ್ಲಿದೆ. ಅಷ್ಟೇ ಅಲ್ಲ ನಮ್ಮ ಇಡಲೊಳಗೂ ಬೆಂಕಿಯಿದೆ. ಜೀವಿಗಳ ರಕ್ಷಣೆಗೆ ಅದು ಬೇಕು. ಇಂತ ಮಹಾಶಕ್ತಿಯನ್ನು ಮನುಷ್ಯ ಪೂಜಿಸುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ಇದರಲ್ಲಿನ ಲಯಶಕ್ತಿ ಒಳ್ಳೆಯದು ಕೆಟ್ಟದ್ದು, ಜೀವ ಜಡ ಎನ್ನದೆ ನಂಗಿಬಿಡುತ್ತದೆ.

ಈ ಉದ್ಯಾನದಲ್ಲಿ 'ಬಿಸಿನೀರಿನ ಬುಗ್ಗೆ'ಗಳು ಇದ್ದು ಇವುಗಳನ್ನು ಜೀರ್ಕೊಳವಿಗಳೆಂದು ಕರೆಯುತ್ತಾರೆ. ಭೂಮಿಯೊಳಗೆ ಶಾಖ, ನೀರು ಮತ್ತು ಒತ್ತಡದಿಂದಾಗಿ ಬುಗ್ಗೆಗಳು ಚಿಮ್ಮುತ್ತವೆ. ಕೆಲವು ಬುಗ್ಗೆಗಳು ೧೨-೨೦೦ ಅಡಿಗಳವರೆಗೂ ಎಗರುತ್ತವೆ. ೨೦೦ ಅಡಿ ನೆಗೆದು ನಿಂತ ಬುಗ್ಗೆಯೊಂದಕ್ಕೆ ಮತ್ತೆ ಜೀವ ಬರಲು ಆರು ಗಂಟೆ ಬೇಕು. ಹಳದಿ ಕಲ್ಲಿನಲ್ಲಿ ಸುಪ್ರಸಿದ್ದವಾದ, ಶಿಸ್ತಿನ ಸಿಪಾಯಿಯಾದ, ನಿಗದಿತ ವೇಳೆಗೆ ಚಿಮ್ಮುವ, ಮತ್ತು ಪ್ರವಾಸಿಗರನ್ನು ಎಂದು ನಿರಾಸೆ ಮಾಡದ ಬುಗ್ಗೆ ಎಂದರೆ **ಹಳೆಯನಂಬಿಕಸ್ತ.** ಇದು ೧೦೦ ರಿಂದ ೧೪೪ ಅಡಿ

ಎತ್ತರದವರೆಗೂ ಸತತ ನಾಲ್ಕು ನಿಮಿಷದವರೆಗೂ ಚಿಮ್ಮುತ್ತದೆ. ಇದರ ಅನುಭವವನ್ನು ಸವಿದ ಲೇಖಕರು ಇದು 'ಮುಸುಕು ಧರಿಸಿದ ಮಾಯಾಂಗನೆಯಂತೆ, ಅಗ್ನಿಕನ್ಯೆಯಂತೆ, ಪಾತಾಳದ ರೂಪವತಿ ಲಜ್ಜಾನ್ವಿತೆಯಂತೆ'೨ ಎಂದು ವರ್ಣಿಸುತ್ತಾರೆ.

ಹಳದಿ ಕಲ್ಲಿನ ಉದ್ಯಾನದಲ್ಲಿ ನೋಡಲೇಬೇಕಾದ ವಿಚಿತ್ರವೆಂದರೆ 'ಸಿಂಗಾರ ದಿಬ್ಬಗಳು.' ಶಾಖ ನೀರು ಸುಣ್ಣ ಕಲ್ಲು ಒತ್ತಡಗಳು ಸೇರಿದಾಗ ಈ ದಿಬ್ಬಗಳು ಮೇಲೆದ್ದು ಬೆಳೆಯುತ್ತವೆ. ಲೋಹಾತ್ಮಕ ಸುಣ್ಣದ ಕಲ್ಲಿನ ಬೆಳವಣಿಗೆ ಇಲ್ಲಿ ಸ್ವಾಭಾವಿಕವಾಗಿದ್ದು, ಅಣುಜೀವಿ ಪಾಚಿಗಳಿಂದಾಗಿ ಈ ದಿಬ್ಬಗಳಿಗೆ ವಿವಿಧ ಬಣ್ಣಗಳಿದ್ದು, ಬಣ್ಣ ಬಣ್ಣದ ಚಿತ್ರಗಳನ್ನು ನೇಯ್ದು ಜಮಖಾನಗಳನ್ನು ಹಾಸಿದಂತೆ ಕಂಗೋಳಿಸುತ್ತವೆ. ಇದನ್ನು ನೋಡಿದ ಲೇಖಕರು ಹಲವು ಬಣ್ಣಗಳ ಮೆರವಣಿಗೆ ಎಂದು ಕರೆದಿದ್ದಾರೆ.

ಸೃಷ್ಟಿ ವೈಭವದ ಆನಂದವನ್ನು, ಭವ್ಯತೆಯ ಬ್ರಹ್ಮತ್ವವನ್ನು, ಭೂಮದ ಭಯಾಶ್ಚರ್ಯವನ್ನು ಏಕಕಾಲದಲ್ಲಿ ಏಕತ್ರ ಅನುಭವಿಸಬೇಕಾದರೆ ಹಳದಿ ಕಲ್ಲಿನ ಕಮರಿಯ ಕಡೆಗೆ ಹೋಗಬೇಕು. ಇದು ಉದ್ಯಾನದ ಪೂರ್ವ ದಿಕ್ಕಿನಲ್ಲಿದೆ. ಆರು ಲಕ್ಷ ವರ್ಷದ ಹಿಂದೆ ಭಾರಿ ಜ್ವಾಲಾಮುಖಿ ಸ್ಫೋಟಗೊಂಡದ್ದೇ ಈ ಕಮರಿಯ ನಿರ್ಮಾಣಕ್ಕೆ ಕಾರಣವಾಗುತ್ತದೆ. ೩೦ ಮೈಲಿ ಅಗಲ, ೪೦ ಮೈಲಿ ಉದ್ದದ, ಸಾವಿರ ಅಡಿ ಆಳದ ಕೂಳ್ಳುದಿ ಹೊಗೆ ಕಾಡಾಯಿ ಮೊದಲು ಕಾಣಿಸಿಕೊಳ್ಳುತ್ತದೆ. ಹಿಂದೆಯೇ ಲಾವ ತುಂಬಿಕೊಳ್ಳತ್ತದೆ. ಲಾವ ನದಿಗಳನ್ನು ತಡೆದು, ಸರೋವರಗಳನ್ನು ಸೃಷ್ಟಿಸುತ್ತದೆ. ಹಿಮಪ್ರವಾಹಗಳು, ನದಿಗಳು ಭೋರ್ಗರೆದು ಕೊರೆದಾಗ ಕಮರಿ ರಚನೆಗೊಳ್ಳುತ್ತದೆ. ಅವೆಲ್ಲವೂ ವಿಶ್ವಶಿಲ್ಪಿ ಕಡೆದ ಶಿಲ್ಪಗಳು. ಈ ಕಮರಿಯಲ್ಲಿ ೧೫೦ ಕ್ಕೂ ಹೆಚ್ಚು ಜಲಪಾತಗಳಿದ್ದು ಅವುಳ ಪೈಕಿ ೩೦೮ ಅಡಿ ಎತ್ತರದ ಮತ್ತು ೧೦೯ ಅಡಿ ಎತ್ತರದ ಜಲಪಾತಗಳು ಸುಂದರವಾದವುಗಳಾಗಿವೆ.

ಈ ಉದ್ಯಾನದ ಪ್ರಮುಖ ಆಕರ್ಷಣೆಯೆಂದರೆ ಹಳದಿ ಕಲ್ಲಿನ ಸರೋವರ. ಹಿಂದಿನ ಕಾಲದ ಹಿಮ ಪ್ರವಾಹಗಳು ಬೆಟ್ಟದ ಕೆಳಗೆ ಸರಿದು, ಕರಗಿ, ಕಣಿವೆಗಳನ್ನು ಕೊರೆದು, ಸರೋವರಗಳನ್ನು ನಿರ್ಮಿಸಿವೆ. ಇದರ ಉದ್ದ ೧೧೦ ಮೈಲಿ, ಒಟ್ಟು ವಿಸ್ತಾರ ೧೩೬ ಚದರ ಮೈಲಿ. ಕೆಲವು ಕಡೆ ೩೯೦ ಅಡಿಗಳಷ್ಟು ಆಳವಾಗಿದೆ. ನೀರು ಶುಭ್ರವಾಗಿದ್ದು, ಕೊರಪಣೆಯಾಗಿದೆ. ಟ್ರೌಟ್ ಎಂಬ ಮೀನಿಗೆ ಉಗ್ರಾಣವಾಗಿದೆ. ಭೂಮಿ ಮೇಲಕ್ಕೂ ಕೆಳಕ್ಕೂ ತೂಗಿದಂತಾಗುತ್ತದೆ. ವಾಲಿದ ಬೋಗಣಿಯ ನೀರಿನಂತೆ ಇಡೀ

ಸರೋವರವೇ ಜಗ್ಗಾಡುತ್ತದೆ. ಚಳಿಗಾಲದಲ್ಲಿ ಸರೋವರದ ಮೇಲ್ಮೈ ಎರಡು ಅಡಿ ದಪ್ಪದ ಹಿಮತಟ್ಟೆಯಾದರೆ, ತಳದಲ್ಲಿಯ ನೀರು ಕೆಲವು ಕಡೆ ಮರಳುತ್ತದೆ.

ಇಲ್ಲಿನ ಭಯಂಕರ ವಿಸ್ಮಯವೆಂದರೆ ಕೆಸರು ಮಣ್ಣು ಜ್ವಾಲಾಮುಖಿ. ಈ ಮಣ್ಣಿನಲ್ಲಿ ಆಮ್ಲಗಳು ಬೆರೆತಿರುವುದರಿಂದ ಸುತ್ತಮುತ್ತ ಅಸಹ್ಯ ವಾಸನೆ ಬರುತ್ತದೆ. ಜ್ವಾಲಾಮುಖಿ ಕಡಾಯಿಯಿಂದ ಒಂದು ಸಾರಿ ಮಣ್ಣು ಹೊರ ಬಂದರೆ ೩೦ ಅಡಿ ಎತ್ತರದ ೩೦ ಅಡಿ ದಪ್ಪದ ಮರಗಳು ಮುಚ್ಚುತ್ತವೆ. ಅಲ್ಲದೆ ಅನೇಕ ಗಿಡಮರಗಳು ಹಾನಿಯಾಗುತ್ತವೆ.

ಹಳದಿ ಕಲ್ಲಿನ ಉದ್ಯಾನ ಭಯಂಕರ ಮತ್ತು ವಿಚಿತ್ರಗಳಿಂದ ಕೂಡಿದ್ದರು ಸಹ ಈ ಪ್ರದೇಶದಲ್ಲಿ ಹಲವು ಪ್ರಾಣಿಗಳು ವಾಸ ಮಾಡುತ್ತವೆ. ಅವುಗಳಲ್ಲಿ ಕರಿ ಮತ್ತು ಬೂದು ಕರಡಿ, ಕಾಡೆಮ್ಮೆ, ಜಿಂಕೆ ಜಾತಿಗೆ ಸೇರಿದ ಮೂಸ್ ಮತ್ತು ಎಲ್ಕ್, ಕೊಂಬಿನ ಕುರಿಗಳು, ಕಯಾಟೆ, ಬಾವಲಿ, ಮಿಂಕ್, ಬೀವರ್ ಹಾಗೂ ಸರೋವರಗಳಲ್ಲಿ ಗಲ್, ಬಾತು ಮತ್ತು ಕಡಲ ಡೇಗೆಗಳನ್ನು ಕಂಡು ಬರುತ್ತವೆ. ಅಲ್ಲದೆ ಸಮೃದ್ಧವಾದ ವನಸಂಪತ್ತಿದ್ದು ಪೈನ್, ಸ್ಪ್ರೂಸ್ ಮರಗಳು, ಪೊದೆಗಳು, ಹಲವು ಬಗೆಯ ಬಣ್ಣ ಬಣ್ಣದ ಹೂಗಿಡಗಳನ್ನು ಕಾಣಬಹುದಾಗಿದೆ.

ಈ ಪ್ರದೇಶ ಹಲವು ವಿಸ್ಮಯಗಳ ಗೂಡಾದ್ದರಿಂದ ಸಾರ್ವಜನಿಕರ ಮನರಂಜನೆಗಾಗಿ ಹಾಗೂ ವಿಜ್ಞಾನದ ಸಂಶೋಧನೆಗಾಗಿ, ಭೂಮಿ ಹಾಗೂ ವನ್ಯಜೀವಿಗಳ ಸಂರಕ್ಷಣೆಗಾಗಿ, ಪರಿಸರ ರಕ್ಷಣೆಗಾಗಿ ಈ ಪ್ರದೇಶದಲ್ಲಿ ಉದ್ಯಾನಗಳ ನಿರ್ಮಾಣ ಮಾಡಿ ೧೮೭೨ ಮಾರ್ಚ ೦೧ ರಂದು ರಾಷ್ಟ್ರೀಯ ಉದ್ಯಾನದ ಸ್ಥಾನಮಾನವನ್ನು ಪಡೆದು ಜಗತ್ತಿನ ಮೊಟ್ಟ ಮೊದಲ ರಾಷ್ಟ್ರೀಯ ಉದ್ಯಾನ ಎಂಬ ಹೆಗ್ಗಳಿಕೆ ಪಡೆದಿದೆ. ಇಂದು ಸಂಶೋದಕರನ್ನು, ವಿಜ್ಞಾನಿಗಳನ್ನು, ದೇಶ-ವಿದೇಶದ ಪ್ರವಾಸಿಗರನ್ನು ಕೈಬೀಸಿ ಕರೆಯುತ್ತಿದೆ. ಪರಿಸರ ರಕ್ಷಣೆಗಾಗಿ ಅಮೇರಿಕಾದ ಜನರು ಪಾಲಿಸುತ್ತಿರುವ ನಿಯಮಗಳಂತೆ ನಮ್ಮ ಭಾರತೀಯರೂ ಚಾಚು ತಪ್ಪದೆ ಪಾಲಿಸುವಂತ್ತಾದರೆ ನಮ್ಮ ದೇಶ, ನಾಡಿನ ಅಭಿವೃದ್ಧಿಯತ್ತ ಸಾಗುವುದರಲ್ಲಿ ಎರಡು ಮಾತ್ತಿಲ್ಲ.

ದೇಜಗೌರವರು ಈ ಕಥನದಲ್ಲಿ ಕಂಡದನ್ನು ಕಂಡಹಾಗೆಯೇ ದಾಖಲಿಸದೆ ಸಂಶೋಧಕರಾಗಿ ಅಲ್ಲಿನ ಇತಿಹಾಸವನ್ನು, ಕಾರಣವನ್ನು ಅದರಿಂದಾಗುವ

ಪರಿಣಾಮವನ್ನು, ಕಂಡುಕೊಳ್ಳುವ ಪ್ರಯತ್ನ ಮಾಡಿದ್ದು, ಅವರಲ್ಲಿನ ಸೂಕ್ಷ್ಮಗ್ರಹತ್ವವನ್ನು ತಿಳಿಸುತ್ತದೆ. ಅಲ್ಲದೆ ತಮ್ಮ ಕಥನದ ಮೂಲಕ ಇತರರಲ್ಲಿ ಕುತೂಹಲ ಮೂಡಿಸುವ ಶಕ್ತಿ ಅವರಲ್ಲಿ ಕಾಣಬಹುದಾಗಿದೆ. ಈ ಕಥನವು ಮಕ್ಕಳಿ ಪ್ರಿಯವಾದಂತ್ತಿದ್ದು, ಇದನ್ನು ಓದಿದ ಮಕ್ಕಳಿಗೆ ಅಲ್ಲಿಗೆ ಹೋಗಬೇಕೆನ್ನು ಬಯಕೆಯನ್ನು ಇಮ್ಮಡಿಗೊಳಿಸುವ ಶಕ್ತಿ ಈ ಕೃತಿಗಿದೆ.

## ಕೊನೆಟಿಪ್ಪಣಿಗಳು

೧. ದೇಜಗೌರವರ – ಹಳದಿಕಲ್ಲಿನ ಉದ್ಯಾನದ ಮುನ್ನುಡಿಯಲ್ಲಿ

೨. ಅದೇ, ಪುಟ –೨೮

# ಅಧ್ಯಾಯ ನಾಲ್ಕು
# ದೇಜಗೌ ಪ್ರವಾಸ ಸಾಹಿತ್ಯದ ಬೆಲೆ–ನೆಲೆ

ದೇಜಗೌರವರು ಕನ್ನಡ ಸಾಹಿತ್ಯಕ್ಕೆ ನೀಡಿದ ಮಹತ್ತರವಾದ ಕೊಡುಗೆ ಎಂದರೆ ಪ್ರವಾಸ ಸಾಹಿತ್ಯ. ಕನ್ನಡದಲ್ಲಿ ಅನೇಕ ಲೇಖಕರು ಪ್ರವಾಸ ಸಾಹಿತ್ಯವನ್ನು ರಚನೆ ಮಾಡಿದ್ದರು ಸಹ ದೇಜಗೌರವರ ಸಾಹಿತ್ಯದಲ್ಲಿ ಭಿನ್ನತೆಯನ್ನು, ವಿಶಿಷ್ಟತೆಯನ್ನು, ವ್ಯತ್ಯಾಸವನ್ನು ಗುರುತಿಸಬಹುದು. ದೇಶ–ಭಾಷೆ, ನಾಡು–ನುಡಿಯ ಬಗ್ಗೆ ನಿರಂತರ ಚಿಂತನೆಶೀಲರಾಗಿರುವ ದೇಜಗೌರವರ ಪ್ರವಾಸಿ ಸಾಹಿತ್ಯದಲ್ಲಿ ಅವರ ದೇಶಿತನವನ್ನು ಕಾಣಬಹುದಾಗಿದೆ. ದೇಜಗೌರವರ ಪ್ರವಾಸಿ ಸಾಹಿತ್ಯದ ವಿಶಿಷ್ಟತೆಯನ್ನು ಈ ಕೆಳಗಿನ ಅಂಶಗಳಿಂದ ಗುರುತಿಸಬಹುದು.

೧. ದೇಜಗೌರವರ ಪ್ರವಾಸ ಸಾಹಿತ್ಯದಲ್ಲಿನ ಕಾದಂಬರಿ ತಂತ್ರದ ಪ್ರಯೋಗ (ವಿಸ್ಮಯಗಳ ನಾಡಿನಲ್ಲಿ) ಯಶಸ್ವಿಯಾಗಿ, ಎಲ್ಲರ ಪ್ರಶಂಸೆಯನ್ನು ಪಡೆದಿರುವುದು.

೨. ಶಾಲೆಯ ಮಕ್ಕಳನ್ನು ಸಂಭೋದಿಸಿ ಅವರನ್ನು ವಿದೇಶದ ಹಲವು ಭಾಗಗಳಿಗೆ ಕೊಂಡೊಯ್ದು (ನಿಚ್ಚಹಸುರಿನನಾಡಿನಲ್ಲಿ) ಅಲ್ಲಿನ ಹಲವು ಭಾಗಗಳನ್ನು ಪರಿಚಯಿಸಿರುವುದು.

೩. ಇವರ ಸಾಹಿತ್ಯದಲ್ಲಿ ಕಂಡದ್ದನ್ನು, ಕೇಳಿದ್ದನ್ನು ಮಾತ್ರ ಹೇಳದೆ, ತಮ್ಮದೇ ಆದ ವರ್ಣನೆಯಿಂದ ಕಾವ್ಯವೊಂದರ ಅನುಭವವನ್ನು ತಂದು ಕೊಡುವುದು.

೪. ದೇಜಗೌರವರು ಯಾವ ದೇಶಕ್ಕೆ ಹೊದರು ಆ ದೇಶವನ್ನು ನಮ್ಮ ದೇಶದೊಂದಿಗೆ (ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ) ತುಲನಾತ್ಮಕವಾಗಿ ಅಧ್ಯಾಯನ ಮಾಡುವುದನ್ನು ಅವರ ಸಾಹಿತ್ಯದಲ್ಲಿ ಕಾಣಬಹುದು.

೫. ಮೂಲತಃ ಗ್ರಾಮಿಣ ಪ್ರದೇಶದವರಾದ ದೇಜಗೌರವರು ಯಾವ ದೇಶಕ್ಕೆ ಹೋಗಲೀ ಅಲ್ಲಿನ ಹಳ್ಳಿಗಳಿಗೆ ಭೇಟಿ ನೀಡಿ ಅಲ್ಲಿನ ಪರಿಸ್ಥಿತಿಯನ್ನು, ನಮ್ಮ ದೇಶದ ಹಳ್ಳಿಗಳ ಪರಿಸ್ಥಿತಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದು.

೬. ರೈತನ ಮಗನಾದ ಇವರು ರೈತರ ಪರವಾಗಿ (ಸರ್ಕಾರದ ವಿರುದ್ಧ) ಧ್ವನಿ ಎತ್ತಿರುವುದು.

೭. ದೇಜಗೌರವರು ಯಾವ ದೇಶಕ್ಕೆ ಪ್ರವಾಸ ಮಾಡಿದರು ಅಲ್ಲಿರುವ ನಮ್ಮ ದೇಶದ ಜನರನ್ನು ನೋಡಿ ಭೇಟಿ ಮಾಡಿ ನಮ್ಮ ಸಂಸ್ಕೃತಿಯನ್ನು ಪ್ರಸಾರ ಮಾಡುವಂತೆ ತಿಳಿಸುತ್ತಿದ್ದರು ಮತ್ತು ಪ್ರಸಾರ ಮಾಡುತ್ತಿರುವವರಿಗೆ ಪ್ರೋತ್ಸಹ ನೀಡಿ ಮೆಚ್ಚುತ್ತಿದ್ದರು.

೮. ಪರಿಸರ ಪ್ರೇಮಿಯಾದ ದೇಜಗೌರವರು ಎಲ್ಲೇ ಪ್ರವಾಸ ಕೈಗೊಂಡರು ಅಲ್ಲಿನ ಸೌಂದರ್ಯವನ್ನು ಸವಿದು, ಸಹೃದಯರಿಗೆ ಉಣಬಡಿಸಿರುವುದು.

೯. ದೇಜಗೌರವರು ತಮ್ಮ ಸಾಹಿತ್ಯದ ಮೂಲಕ ಪ್ರವಾಸಿಗರಲ್ಲಿ ಕುತೂಹಲವನ್ನು ಮೂಡಿಸಿದ್ದಾರೆ.

೧೦. ದೇಜಗೌ ಪ್ರವಾಸ ಸಾಹಿತ್ಯದಲ್ಲಿ ಅನುಭವದ ನೈಜತೆ ಅದರ ಅಭಿವ್ಯಕ್ತಿಯ ನಿಖರತೆಯು ಮುಖ್ಯವಾಗಿ ಎದ್ದು ಕಾಣುತ್ತದೆ.

೧೧. ದೇಜಗೌರವರ ಪ್ರವಾಸ ಸಾಹಿತ್ಯ ಮನರಂಜನೆಯನ್ನು ನೀಡುವುದರ ಜೊತೆಗೆ ಜ್ಞಾನವನ್ನು ನೀಡುತ್ತವೆ.

೧೨. ಇವರ ಪ್ರವಾಸ ಸಾಹಿತ್ಯದಲ್ಲಿ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಸಂಸ್ಕೃತಿಯನ್ನು ಒಟ್ಟಾಗಿ ತಂದಿರುವುದು ಮಹತ್ವದಾಗಿದೆ.

೧೩. ದೇಜಗೌರವರು ಪ್ರವಾಸವನ್ನು ಶೈಕ್ಷಣಿಕವಾಗಿ ಸ್ವೀಕರಿಸಿ ಅಲ್ಲಿನ ವಿಶ್ವವಿದ್ಯಾಲಯಗಳ ವಿಸ್ವಾಂಸರೊಂದಿಗೆ ಚರ್ಚಿಸಿ ಉತ್ತಮ ಅಂಶಗಳನ್ನು ನಮ್ಮ ವಿಶ್ವವಿದ್ಯಾಲಯಗಳಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿರುವುದು.

೧೪. ಜಾನಪದ ತಜ್ಞರಾದ ದೇಜಗೌರವರು ತಮ್ಮ ಪ್ರವಾಸ ಕಾಲದಲ್ಲಿ ಅಲ್ಲಿನ ಬುಡಕಟ್ಟು ಜನಾಂಗದವರನ್ನು ಆಳವಾಗಿ ಮತ್ತು ಸಾಂಸ್ಕೃತಿಕವಾಗಿ ಅಧ್ಯಾಯನ ಮಾಡಿರುವುದು.

೧೫. ಯಾವ ದೇಶಕ್ಕೆ ಭೇಟಿ ನೀಡಿದರು ಸಹ ಆ ದೇಶದ ಇತಿಹಾಸವನ್ನು ಅಲ್ಲಿನ ಪ್ರಾಚೀನ ಸಂಸ್ಕೃತಿಯನ್ನು ಪ್ರಸ್ತಾಪಿಸಿರುವುದು.

೧೬. ಇವರ ಪ್ರವಾಸ ಸಾಹಿತ್ಯದ ಪ್ರತಿಯೊಂದು ಪುಟದಲ್ಲೂ ಭಾಷಾಭಿಮಾನ, ದೇಶಾಭಿಮಾನವನ್ನು ವ್ಯಕ್ತಪಡಿಸಿರುವುದು.

೧೭. ದೇಜಗೌ ತಮ್ಮ ಪ್ರವಾಸ ಸಾಹಿತ್ಯದಲ್ಲಿ ಅಚ್ಚಗನ್ನಡ ಪದಗಳನ್ನು ಹೆಚ್ಚಾಗಿ ಬಳಸಿರುವುದು. ಮತ್ತು ಇತರ ಭಾಷೆಗಳಲ್ಲಿರುವ ದ್ರಾವಿಡ ಪದಗಳು ಹಾಗೂ ಅಚ್ಚಗನ್ನಡ ಪದಗಳನ್ನು ಪತ್ತೆ ಅಚ್ಚಲು ಪ್ರಯತ್ನಿಸಿರುವುದು.

೧೮. ವಿದೇಶಗಳಿಗೆ ಹೋಗಲಾರದವರಿಗೆ ಆ ದೇಶಗಳನ್ನು ವಾಙ್ಮಯ ದರ್ಪಣದಲ್ಲಿ ಪ್ರದರ್ಶಿಸುವ, ಅವರನ್ನು ಅಲ್ಲೆಲ್ಲ ಕರೆದೊಯ್ದು ಸುಂದರ ದೃಶ್ಯಗಳನ್ನು ತೋರಿಸಿದ್ದಾರೆ.

ದೇಜಗೌರವರ ಪ್ರವಾಸಿ ಸಾಹಿತ್ಯ ಅವಲೋಕಿಸಿದಾಗ ವೈವಿಧ್ಯದೊಳಗೆ ಬಹುತ್ವವನ್ನು ಹುಡುಕುತ್ತಿರುವುದನ್ನು ಕಾಣಬಹುದಾಗಿದೆ.

## ೧. ಹಲವರ ಅಭಿಪ್ರಾಯದಲ್ಲಿ ದೇಜಗೌ ಪ್ರವಾಸ ಸಾಹಿತ್ಯ

ದೇಜಗೌರವರು ಅಮೇರಿಕಾ, ಆಫ್ರೀಕಾದ ಹಲವು ದೇಶಗಳನ್ನು ಸುತ್ತಿ ಅವರಿಗಾದ ಅನುಭವನ್ನು ಕಾವ್ಯ ರೂಪದಲ್ಲಿ ಅನೇಕ ಕೃತಿಗಳಾಗಿ ಎಣೆದುಕೊಟ್ಟಿದ್ದಾರೆ. ಇವರ ಕೃತಿಗಳನ್ನು ಓದಿದ ಅನೇಕ ಲೇಖಕರು, ವಿದ್ವಾಂಸರು, ವಿಮರ್ಶಕರು ತಮ್ಮದೆ ಅಭಿಪ್ರಾಯಗಳನ್ನು ಹೇಳುವುದರ ಮೂಲಕ ಅವರ ಸಾಹಿತ್ಯದ ಗಟ್ಟಿತನವನ್ನು ಹೇಳುವ ಕೆಲಸ ಮಾಡಿದ್ದಾರೆ, ಅವುಗಳಲ್ಲಿ ಪ್ರಮುಖವಾದವು ಇಲ್ಲಿವೆ.

ಶ್ರೀ ಡಾ// ತಿಪ್ಪೇಸ್ವಾಮಿ ರವರು "ದೇಜಗೌ ಪ್ರವಾಸ ಸಾಹಿತ್ಯ ಶೈಕ್ಷಣಿಕ ಮಹತ್ವವುಳ್ಳದಾಗಿದ್ದು, ಶಿಕ್ಷಣ ತಜ್ಞನ ಪ್ರವಾಸಿ ವರದಿ ಹಾಗೂ ವಿಶ್ಲೇಷಣೆಯನ್ನು ಮತ್ತು ನಮ್ಮ ತಜ್ಞರಿಗೆ ದಾರಿ ದೀಪವಾಗುವಂಥ ವಿಚಾರಗಳ ಕ್ರೋಢೀಕರಣವನ್ನು ಕಾಣಬಹುದಾಗಿ"[೧] ತಿಳಿಸಿದ್ದಾರೆ.

ಶ್ರೀ ಗೌರೀಶ ಕಾಯ್ಕಿಣಿ ರವರು "ವಿದೇಶದಲ್ಲಿ ಕಂಡು ಬರುವ ಚಿಕ್ಕಪುಟ್ಟ ವಿವಿಧ ಸಂಗತಿಗಳ ಬಗೆಗೆ ದೇಜಗೌರವರ ಪ್ರತಿಕ್ರೀಯೆ ಹೆಚ್ಚಿನದಾಗಿದ್ದು, ಬೋಧಕವೂ, ನಿರಾಡಂಬರವೂ, ನಿರಾಭರಣವೂ, ಹಾಗೂ ಅವರ ಲೇಖನದ ಲಾವಣ್ಯ ಹೈಡನ್ ಬರ್ಗನಲ್ಲಿರುವ Visible Concrete ಎಂಬ ವಾಸ್ತುಶಿಲ್ಪದ ಶೈಲಿಯಂತೆ ಇದೆ"[೨] ಎಂದಿದ್ದಾರೆ.

ಶ್ರೀ ಲಿಂಗೇಗೌಡ ಬೆಳೆಕೆರೆಯವರು "ದೇಜಗೌರವರು ವಿದೇಶಿ ಪ್ರವಾಸದಲ್ಲಿ ಯಾವ ಕವಿಯ ಸ್ಮಾರಕ ನೋಡಿದರೂ, ಪಂಪರನ್ನರದೆ ನೆನಪು. ಯಾವ ಭಾಷೆಯ ಪದ್ಯ ಓದಿದರೂ ಕನ್ನಡ ಪದ್ಯದ ಮೇಲೆ ಮನಸ್ಸು ಕನ್ನಡಿಗರ ಜಡತ್ವಕ್ಕೆ ಅನೇಕ ಸಾರಿ ಕೊರಗಿದ್ದಾರೆ, ದುಃಖಿಸಿದ್ದಾರೆ, ಕಣ್ಣೀರು ಕರೆದಿದ್ದಾರೆ. ಕುಳಿತಲ್ಲಿ, ನಿಂತಲ್ಲಿ ಕನ್ನಡದ ಸಾಂಸ್ಕೃತಿಕ ರಾಯಭಾರಿಯಾಗಿ ಹೋಗಿದ್ದ ಇವರಿಗೆ ಕನ್ನಡಿಗರು ನಿರಂತರ ಕೃತಜ್ಞರಾಗಿರಬೇಕು"[೩] ಎಂದು ತಮ್ಮ ಅಭಿಪ್ರಾಯ ತಿಳಿಸಿದ್ದಾರೆ.

ಶ್ರೀ ಜೆ. ಎಸ್ ಪರಶಿವಮೂರ್ತಿ ಅವರು "ದೇಜಗೌರವರು ತಮ್ಮ ಪ್ರವಾಸ ಸಾಹಿತ್ಯದಲ್ಲಿ ದೇಶದ ಹಿಂದಿನ ಮತ್ತು ಇಂದಿನ ಇತಿಹಾಸ, ಸಂಸ್ಕೃತಿ, ಭೌಗೋಳಿಕ ವಿಷಯಗಳನ್ನು ತುಲನೆ ಮಾಡಿದ್ದಾರೆ. ತಮ್ಮ ಯಾತ್ರೆಯ ಸಿಂಹಾವಲೋಕನ ನಡೆಸಿ, ತಾವು ಕಂಡುಂಡ ಅನುಭವಗಳನ್ನು ಓದುಗರಿಗೆ ಉಣಬಡಿಸಿದ್ದಾರೆ"[೪] ಎಂದಿದ್ದಾರೆ.

ಶ್ರೀ ಎಂ.ವಿ. ನಾಗರಾಜುರವರು "ದೇಜಗೌರವರ ಪ್ರವಾಸ ಸಾಹಿತ್ಯ ಮಾನವನ ಬದುಕನ್ನು ಕುತೂಹಲದಿಂದ ಅರ್ಥೈಸುವ ಎಲ್ಲರಿಗೂ ಮುದಕೊಡುವ ಪುಸ್ತಕಗಳಾಗಿವೆ"[೫] ಎಂದು ತಿಳಿಸಿದ್ದಾರೆ.

ಶ್ರೀ ವಿದ್ವಾನ್ ಶಿವಕುಮಾರ ಸ್ವಾಮಿಯವರು "ದೇಜಗೌ ಕೇವಲ ಪ್ರವಾಸ ಮಾಡಬೇಕೆಂದು ಹೊರದೇಶಗಳಿಗೆ ಹೋಗಿ ಬಂದವರಲ್ಲ. ಅಲ್ಲಿನ ವಿದ್ಯಮಾನಗಳನ್ನು ಗಮನಿಸಿ, ಇಲ್ಲಿನ ಅಧ್ಯಾಯನದ ಆಳ ಅಗಲಗಳನ್ನು ವಿಸ್ತರಿಸಲು ಅನುಸರಿಸಬೇಕಾದ ನೂತನ ಅಂಶಗಳನ್ನು ಕುರಿತು ಆಲೋಚಿಸಿದವರು"[೬] ಎಂದಿದ್ದಾರೆ.

ಶ್ರೀ ಗೊರೂರು ರಾಮಸ್ವಮಿ ಅಯ್ಯಂಗಾರ್ ಅವರು "ಇಂಗ್ಲೆಂಡು, ಆಫ್ರಿಕಾ, ರಷ್ಯಾ, ಆಸ್ಟ್ರಿಯಾ, ಜರ್ಮನಿ, ಶ್ರೀಲಂಕ, ಇಸ್ರೇಲ್ ಮುಂತಾದ ದೇಶಗಳ ಪ್ರವಾಸಗಳು, ಬಿಡುವಿಲ್ಲದೆ ಆತುರದಲ್ಲಿ ನಡೆದರು ದೇಜಗೌ ತಮ್ಮ ಸರ್ವ ಕುತೂಹಲ ಸ್ವಭಾವಕ್ಕನುಗುಣವಾಗಿ ಆ ರಾಷ್ಟ್ರಗಳಲ್ಲಿಯೂ ನೋಡಬೇಕಾದುದನ್ನೆಲ್ಲ ನೋಡಿ ಹಿಂದಿರುಗಿ, ಸಾರವತ್ತಾದುದನ್ನೆಲ್ಲ ನಮ್ಮ ಜನತೆಯ ಜ್ಞಾನಾರ್ಜನೆಗಾಗಿಯೂ ಲಾಭಕ್ಕಾಗಿಯೂ ಚಿತ್ರಿಸಿಕೊಟ್ಟಿದ್ದಾರೆ."[೭] ಎಂದು ನುಡಿದಿದ್ದಾರೆ.

ಶ್ರೀ ಹಂಶಿಭ ರವರು "ದೇಜಗೌ ಪ್ರವಾಸ ಸಾಹಿತ್ಯ ಪ್ರವಾಸಿಗರಿಗೆ ಮಾಹಿತಿ ನೀಡುವ, ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವ, ಕುಂತಲ್ಲಿಯೇ ದೇಶ ಸುತ್ತಿದ ಅನುಭವ ನೀಡುವುದಲ್ಲದೇ ಸಂಶೋಧಕರಿಗೆ ಮಾರ್ಗದರ್ಶನವನ್ನು ನೀಡಬಲ್ಲವೂ" ಎಂದಿದ್ದಾರೆ

ದೇಜಗೌರವರ ಪ್ರವಾಸ ಸಾಹಿತ್ಯವನ್ನು ಕುರಿತು ಮೇಲ್ಕಂಡ ವಿದ್ವಾಂಸರ ಅಭಿಪ್ರಾಯವನ್ನು ಗಮನಿಸಿದರೆ ಇವರ ಪ್ರವಾಸ ಸಾಹಿತ್ಯದಿಂದ ಒಬ್ಬೊಬ್ಬ ವಿದ್ವಾಂಸರಿಗೂ ಹೊಸದಾದ ಒಂದೊಂದು ವಿಚಾರಗಳನ್ನು, ಅಂಶಗಳನ್ನು, ತಿಳಿಸುತ್ತಿರುವುದನ್ನು ನೋಡಬಹುದಾಗಿದೆ.

ಹೀಗೆ ಒಟ್ಟಾರೆ ಪ್ರವಾಸ ಸಾಹಿತ್ಯವನ್ನು ಅದರಲ್ಲಿರುವ ಹೊಸದಾದ ಅಂಶಗಳನ್ನು ಮತ್ತು ವಿದ್ವಾಂಸರ ಅಭಿಪ್ರಾಯಗಳನ್ನು ಗಮನದಲ್ಲಿಟ್ಟುಕೊಂಡು ಜಗತ್ತಿನ ಪ್ರಮುಖ ದೇಶಗಳನ್ನು ಸುತ್ತಿ ಅಲ್ಲಿನ ಮಾನವಿಕ ಅಂಶಗಳನ್ನು ಸಮರ್ಥವಾಗಿ ಅರ್ಥೈಸಿದ್ದು, ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಇವರ ಸಾಹಿತ್ಯಕ್ಕೆ ಒಂದು ನೆಲೆ-ಬೆಲೆ ಇರುವುದನ್ನು ಕಾಣಬಹುದಾಗಿದೆ.

## ಕೊನೆಟಿಪ್ಪಣಿಗಳು

೧. ಎಂ ವಿಜಯಲಕ್ಷ್ಮೀರವರ - ದೇಜಗೌ ಜೀವನ ಮತ್ತು ಸಾಧನೆ, ಪುಟ – ೨೯

೨. ಅದೇ, ಪುಟ – ೩೨೯

೩. ಅದೇ, ಪುಟ – ೩೨೯

೪. ಅದೇ, ಪುಟ – ೩೩೩

೫. ಅದೇ, ಪುಟ – ೩೩೫, ೩೩೬

೬. ಅದೇ, ಪುಟ – ೩೪೫

೭. ಅದೇ, ಪುಟ – ೩೪೫, ೩೪೬

# ಅಧ್ಯಾಯ ಐದು
# ಉಪಸಂಹಾರ

ಕನ್ನಡದ ಕಾಯಕ ಯೋಗಿ ಪ್ರೊ. ದೇಜಗೌರವರು ತಮ್ಮ ನಿತ್ಯ ನಿತ್ಯವೂ ಕಾಯಕದಲ್ಲಿ ತೊಡಗಿ ಹೊಸ ಹೊಸ ಜ್ಞಾನದ ಶಾಖೆಯನ್ನು ವಿಸ್ತರಿಸುತ್ತಾ ಕನ್ನಡಿಗರನ್ನು ಜಾಗೃತಗೊಳಿಸುತ್ತಿರುವವರಲ್ಲಿ ಅಗ್ರಗಣ್ಯರಾಗಿದ್ದಾರೆ. ಇವರ ವಿಚಾರಧಾರೆಗಳು ಸಾರ್ವಕಾಲಿಕವೂ, ಅನುಸರಣಿ ಯೋಗ್ಯವೂ ಆದಂತ್ತವು. ನಾಡು ನುಡಿ ಸಂಸ್ಕೃತಿ, ಸಾಮಾಜಿಕ ಪ್ರಜ್ಞೆ, ರಾಜಕೀಯ, ಶೈಕ್ಷಣಿಕ ಹಾಗೂ ಧಾರ್ಮಿಕ ವಿಚಾರಗಳು ಕೇವಲ ನಾಡಿ ಮಾತ್ರವಲ್ಲದೆ ಭರತ ಖಂಡದ ಕ್ಷೇಮದ ಹಾಗೂ ಭದ್ರತೆಯ ದೃಷ್ಟಿಯಿಂದ ಚಿಂತಿಸುತ್ತಿರುವಂತಿವೆ ಎಂದು ಹೇಳಬಹುದು. .

ದೇಜಗೌರವರ ಪ್ರತಿಯೊಂದು ಕೃತಿಯಲ್ಲಿಯೂ ಹೊಸ ಹೊಸ ದರ್ಶನಾಂಶಗಳು ಸ್ಫುರಿಸುವಂತಿವೆ. ಇವರ ಸಾಹಿತ್ಯ ಕೃತಿಗಳು ಹೊಸ ಸಂವೇದನೆಯನ್ನು ಸಮಾಜಕ್ಕೆ ಕೊಡುಗೆಯಾಗಿ ನೀಡುವುದರ ಮೂಲಕ ಸಮಾಜವನ್ನು ಕಟ್ಟುವ ಮತ್ತು ಸಮಾಜಿಕ ಬದಲಾವಣೆಯನ್ನು ತರುವ ಕೆಲಸವನ್ನು ಮಾಡುತ್ತಿದ್ದಾರೆ.

ಕನ್ನಡ ಸಾಹಿತ್ಯ ಲೋಕಕ್ಕೆ ದೇಜಗೌರವರ ಕೊಡುಗೆ ಅಪಾರವಾದದ್ದು, ಕನ್ನಡದ ಸಾಹಿತ್ಯದಲ್ಲಿ ಎಲ್ಲಾ ಪ್ರಕಾರದಲ್ಲಾ ಕೃಷಿ ಮಾಡಿರುವ ಇವರು ಪ್ರವಾಸ ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಕೊಡುಗೆ ಶ್ರೀಮಂತವಾದದ್ದು. ಇವರ ಪ್ರವಾಸ ಸಾಹಿತ್ಯದಲ್ಲಿ ಹೊಸದೃಷ್ಟಿಕೋನವನ್ನು, ಪ್ರವಾಸದ ನೂತನ ಅನುಭವವನ್ನು ಸಹೃದಯರಿಗೆ ನೀಡುತ್ತವೆ.

'ದೇಜಗೌರವರ ಪ್ರವಾಸ ಸಾಹಿತ್ಯ' ಎಂಬ ನಿಬಂಧದಲ್ಲಿ ಒಟ್ಟು ೫ ಅಧ್ಯಾಯಗಳನ್ನು ಮಾಡಿಕೊಂಡು ಒಂದೊಂದು ಅಧ್ಯಾಯವನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ. ಮೊದಲನೆ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ದೇಜಗೌರವರ ಪ್ರವಾಸ ಸಾಹಿತ್ಯದಲ್ಲಿನ ಮಹತ್ವ ಪ್ರವಾಸ ಸಾಹಿತ್ಯದ ಅಧ್ಯಾಯನದಿಂದ ಕೇವಲ

ಮನೊರಂಜನೆ, ಚಿಂತನೆ, ಸೃಜನಶೀಲತೆ, ಮಾತ್ರವಲ್ಲ, ಜ್ಞಾನವು ಲಭಿಸುತ್ತದೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಪ್ರವಾಸ ಸಾಹಿತ್ಯದ ಅರ್ಥ, ಲಕ್ಷಣಗಳು, ಪ್ರಕಾರಗಳು, ಮತ್ತು ನಡೆದು ಬಂದ ರೀತಿಯ ಬಗ್ಗೆ ಚರ್ಚಿಸಲಾಗಿದೆ. ಮಾನವ ನಿಂತ ಕಡೆ ನಿಲ್ಲದೆ ಒಂದು ಕಡೆಯಿಂದ ಮತ್ತೊಂದು ಕಡೆ ಚಲಿಸಲು ಪ್ರಾರಂಭ ಮಾಡಿದಿಂದ ಆರಂಭವಾದ ಪ್ರವಾಸ ಸಾಹಿತ್ಯದ ಮೂಲ ನಂತರ ದೇಶ ವಿದೇಶಗಳಲ್ಲಿ ಅರಡಿಕೊಂಡಿತು. ಪ್ರಾರಂಭದಲ್ಲಿ ಆಹಾರಕ್ಕೆ ಹೋದವನು ನಂತರದಲ್ಲಿ ಮನೊರಂಜನೆಗಾಗಿ, ಜ್ಞಾನ ಸಂಪಾದನೆಗಾಗಿ, ಮತ್ತು ವ್ಯವಹಾರಗಳಿಗಾಗಿ ಪ್ರವಾಸ ಮಾಡಬೇಕಾಗುತ್ತದೆಂಬುದನ್ನು ಮತ್ತು ಪ್ರಾಚೀನ ಕಾಲದಲ್ಲಿನ ಪ್ರವಾಸದ ಉದ್ದೇಶ, ಇತ್ತೀಚಿನ ಪ್ರವಾಸದ ಉದ್ದೇಶವನ್ನು ಚರ್ಚಿಸಲಾಗಿದೆ. ಪ್ರವಾಸದಲ್ಲಿ ಹಲವು ಲಕ್ಷಣಗಳನ್ನು ತಿಳಿಸುತ್ತಾ, ಪ್ರವಾಸ ಸಾಹಿತ್ಯದಲ್ಲೂ ಹಲವು ಪ್ರಕಾರಗಳಿವೆ ಎಂಬುದನ್ನು ವಿವರಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ದೇಜಗೌರವರ ಜನನ, ಶಿಕ್ಷಣ ಶ್ರೀ ಕುವೆಂರವರ ನಡುವಿನ ಗುರುಶಿಷ್ಯರ ಸಂಬಂದ, ಇವರು ಕನ್ನಡ ನಾಡು ನುಡಿಗಾಗಿ ಮಾಡಿದ ಹೋರಟಗಳು, ಜನರರಿಗೆ ಹೋರಾಡುವಂತೆ ನೀಡಿದ ಕರೆಗಳ ಬಗ್ಗೆ ಪ್ರಸ್ತಾವಿದೆ. ಅಲ್ಲದೆ ಅವರು ಸ್ಥಾಪಿಸಿದ ಸಂಘ ಸಂಸ್ಥೆಗಳು, ಅವರಿಗೆ ಬಂದ ಪ್ರಶಸ್ತಿಗಳು, ಕೃತಿಗಳನ್ನು ತಿಳಿಸಲಾಗಿದೆ.

ದೇಜಗೌರವರು ಅಮೇರಿಕಾ, ಆಫ್ರಿಕಾ, ರಷ್ಯಾ, ನೈಜೀರಿಯಾ, ಆಸ್ಟ್ರೀಯಾ, ಜಪಾನ, ಇಟಲಿ, ಇಸ್ರೇಲ್, ಐರ್ಲೆಂಡ್, ಕಿನ್ಯಾ, ಶ್ರೀಲಂಕಾ, ಸಿಂಗಾಪುರ, ಇಂಗ್ಲೇಂಡ್, ಮೊದಲಾದ ದೇಶಗಳನ್ನು ಸುತ್ತಿಬಂದು ಒಂಬ್ಬಂತ್ತು ಪ್ರವಾಸ ಸಾಹಿತ್ಯ ಕೃತಿಗಳನ್ನು ರಚನೆ ಮಾಡಿದ್ದು, ಒಂದಕ್ಕಿಂತ ಒಂದು ಭಿನ್ನವಾಗಿ, ಹೊಸತನದಿಂದ ಕೂಡಿವೆ ಎಂಬುದನ್ನು ಚರ್ಚಿಸಲಾಗಿದೆ. ದೇಜಗೌರವರು ಕೈಗೊಂಡ ಪ್ರವಾಸವನ್ನು ವಿಭಾಗ ಮಾಡಿ ವಿವರಿಸಲಾಗಿದೆ. ಮತ್ತು ಅವರ ಪ್ರವಾಸ ಕೃತಿಗಳಲ್ಲಿ ಬಳಸು ಮೂರು ತಂತ್ರಗಳ ಬಗ್ಗೆ ಚರ್ಚಿಸಲಾಗಿದೆ. ಮತ್ತು ನಿಬಂಧನೆಗಾಗಿ ಆಯ್ಕೆ ಮಾಡಿರುವ ಅವರ 'ನಿಚ್ಚಹಸುರಿನ

ನಾಡಿನಲ್ಲಿ' 'ವಿಸ್ಮಯಗಳ ನಾಡಿನಲ್ಲಿ' ಮತ್ತು 'ಹಳದಿ ಕಲ್ಲಿನ ಉದ್ಯಾನ' ಕೃತಿಗಳ ಬಗ್ಗೆ ವಿವರಿಸಲಾಗಿದೆ.

'ವಿಸ್ಮಯಗಳ ನಾಡಿನಲ್ಲಿ' ಪ್ರವಾಸ ಕಥನವು ದೇಜಗೌರವರು ಮಾಡಿದ ಅಮೇರಿಕಾ ಪ್ರವಾಸದ ಕಥನವಾಗಿದ್ದು ಕಾದಂಬರಿ ತಂತ್ರದ ಹೊಸ ತನವನ್ನು ಮತ್ತು ಈ ಕಥನದಲ್ಲಿ ಅಮೇರಿಕಾ ಮತ್ತು ಭಾರತಗಳ ನಡುವೆ ಶಿಕ್ಷಣ, ರಾಜಕೀಯ, ಧಾರ್ಮಿಕ, ವಿಚಾರಗಳನ್ನು ತೌಲನಿಕವಾಗಿ ಚರ್ಚಿಸಲಾಗಿದೆ. ಅಮೇರಿಕಾದ ರಸ್ತೆ ನಿಯಮಗಳನ್ನು ಭಾರತೀಯರು ತಿಳಿದುಕೊಳ್ಳು ಹಾಗೆ ವಿವರಿಸಲಾಗಿದೆ. ಹಾಗೂ ಅಮೇರಿಕಾದ ಪ್ರಮುಖ ನಾಯಕರನ್ನು ಅವರ ತತ್ವ, ಆದರ್ಶವನ್ನು, ಅಮೇರಿಕನ್ನರಿಗೆ ಇರುವ ಕಲೆಯ ಆಸಕ್ತಿಯನ್ನು ಚರ್ಚಿಸಲಾಗಿದೆ.

'ನಿಚ್ಚಹಸುರಿನ ನಾಡಿನಲ್ಲಿ' ಕಥನವು ಸ್ವಿಡ್ಜರ್‌ಲ್ಯಾಂಡಿನ ಪ್ರವಾಸವಾಗಿದ್ದು, ಭಾರತೀಯ ಸಂಸ್ಕೃತಿಯನ್ನು ವಿದೇಶದಲ್ಲಿ ಪ್ರಸಾರ ಮಾಡುತ್ತಿರುವವರಲ್ಲಿ ವಿಜಯರಾವ್, ಮತ್ತು ಕೇಶವ್‌ರವರ ಬಗ್ಗೆ ಮತ್ತು ಸ್ವಿಡ್ಜರ್‌ಲ್ಯಾಂಡಿನ ಉದ್ಯಾನದ ಬಗ್ಗೆ, ಅಲ್ಲಿನ ಹಳ್ಳಿಗಳಿ ಬೇಟಿ ನೀಡಿ ಆದ ಅನುಭವದ ಬಗ್ಗೆ ಮತ್ತು ಭಾರತ ಹಳ್ಳಿಗಳೊಂದಿಗಿನ ಹೋಲಿಕೆಯನ್ನು ಸ್ವಿಡ್ಜರ್‌ಲ್ಯಾಂಡಿನ ವಿದ್ವಾಂಸರಲ್ಲಿ ಪ್ರಮುಖರಾದ ಕಿಟೆಲ್, ಗುಂಡರ್ಟ್‌ರವರು ಮಾಡಿದ ಕನ್ನಡ ಸೇವೆಯ ಬಗ್ಗೆ ಮತ್ತು ಭಾರತ, ಸ್ವಿಡ್ಜರ್‌ಲ್ಯಾಂಡ್ ಎರಡು ರಾಷ್ಟ್ರಗಳ ನಡುವಿನ ಸ್ನೇಹದ ಬಗ್ಗೆ ಮತ್ತು ವಸ್ತು ಸಂಗ್ರಹಾಲಯಗಳಿಂದ ಉಂಟಾಗುವ ರಾಷ್ಟ್ರೀಯತ್ವದ ಬಗ್ಗೆ ಚರ್ಚಿಸಲಾಗಿದೆ.

ಹಳದಿಕಲ್ಲಿನ ಉದ್ಯಾನ ಕಥನವು ಅಮೇರಿಕಾ ಪ್ರವಾಸವಾಗಿದ್ದು ಅಮೇರಿಕಾ ದಲ್ಲಿರುವ ಹಳದಿ ಕಲ್ಲಿನ ರಾಷ್ಟೀಯ ಉದ್ಯಾನ (ಯೆಲ್ಲೊ ಸ್ಟೋನ್ ನ್ಯಾಷನಲ್ ಪಾರ್ಕ್)ದ ಇತಿಹಾಸ, ಅಲ್ಲಿ ನಡೆಯುವ ಹಲವು ವಿಸ್ಮಯಗಳ ಬಗ್ಗೆ ಸಂಶೋಧನಾತ್ಮವಾಗಿ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ದೇಜಗೌರವು ತಮ್ಮ ಕನ್ನಡ ಸಾಹಿತ್ಯಕ್ಕೆ ನೀಡಿದ ಪ್ರವಾಸ ಸಾಹಿತ್ಯದಲ್ಲಿನ ವಿಶಿಷ್ಟ ಅಂಶಗಳನ್ನು ಹುರುತಿಸಿ ಮತ್ತು ಹಲವು ವಿದ್ವಾಂಸರ ಅಭಿಪ್ರಾದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಅವರ ಸಾಹಿತ್ಯಕ್ಕೆ ಇಂದು ನೆಲೆ-ಬೆಲೆ ಇರುವುದನ್ನು ತೋರಿಸಲಾಗಿದೆ.

# ಪರಾಮರ್ಶನ ಗ್ರಂಥಗಳು


೧. ವಿಸ್ಮಯಗಳ ನಾಡಿನಲಿ
ಪ್ರೊ. ದೇಜಗೌ
ಸಂವಹನ ಪಬ್ಲಿಕೇಷನ್–೧೯೯೫
ಶಿವರಾಂಪೇಟೆ ಮೈಸೂರು

೨. ನಿಚ್ಚಹಸುರಿನ ನಾಡಿನಲ್ಲಿ
ಪ್ರೊ. ದೇಜಗೌ
ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ–೧೯೯೯
ಮೈಸೂರು

೩. ಹಳದಿಕಲ್ಲಿನ ಉದ್ಯಾನ
ಪ್ರೊ. ದೇಜಗೌ
ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ–೧೯೯೯
ಮೈಸೂರು

೪. ಅನಿಕೇತನದಲ್ಲೊಂದು ವಿಶ್ವಚೇತನ
ಡಾ// ಟಿ. ಕೆ. ಕೆಂಪೇಗೌಡ
ಯಡಿಯೂರು ಸಿದ್ದಲಿಗೇಶ್ವರ ಪ್ರಕಾಶನ–೨೦೦೯
ಟಿ.ಕೆ ಲೇಔಟ್ ಮೈಸೂರು

೫. ದೇಜಗೌ ಜೀವನ ಮತ್ತು ಸಾಧನೆ
ಎಂ ವಿಜಯಲಕ್ಷ್ಮೀ
ಪ್ರತಿಧ್ವನಿ ಪ್ರಕಾಶನ–೨೦೧೨
ಬೆಂಳಗಳೂರು

೬. ವಿಶ್ವ ಪರ್ಯಟನೆ
ಶ್ರೀ ಕೆ. ಪಿ ಮೆನನ್
ಅನುವಾದಕರು–ಮಾ. ಭೀ ಶೇಷಗಿರಿರಾವ್
ಹೇಮಂತ್ ಸಾಹಿತ್ಯ–೧೯೬೬
ಬೆಂಗಳೂರು

೭. ಪ್ರವಾಸ ಸಂಭ್ರಮ
ಪ್ರೊ. ದೇಜಗೌ
ಸಾಗರ್ ಪ್ರಕಾಶನ–೨೦೧೧
ಬೆಂಗಳೂರು

೮. ಪುಸ್ತಕ ಪ್ರಪಂಚ
ದೇಜಗೌ ವಿಶೇಷ ಸಂಚಿಕೆ ಜುಲೈ ಆಗಸ್ಟ–೧೯೯೯
ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ
ಮೈಸೂರು

೯. ದೇಜಗೌರವರ ಕಾವ್ಯ ಸಂಕಲನ
ವೈದ್ಯವಾರ್ತ ಪ್ರಕಾಶನ
ಮೈಸೂರು